




**ಎಸ್.ಆರ್. ಉಮಾಶಂಕರ್,** ಭಾ.ಆ.ಸೇ.,
ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ
(ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ)

6ನೇ ಮಹಡಿ, ಗೇಟ್ ನಂ. 2, ಬಹುಮಹಡಿಗಳ ಕಟ್ಟಡ
ಡಾ॥ ಬಿ.ಆರ್. ಅಂಬೇಡ್ಕರ್ ವೀದಿ, ಬೆಂಗಳೂರು-560 001
ದೂ: ಕಛೇರಿ: 080-22257334, ಫ್ಯಾಕ್ಸ್: 080-22385545
E-mail: prsprim-edu@karnataka.gov.in

ದಿನಾಂಕ: 16-12-2019

# ಸಂದೇಶ

28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಹಾಗೂ ಶಿಬಿರ ಕೇಂದ್ರದ ಆವರಣದಲ್ಲಿ 27.12.2019ರಿಂದ 02.01.2020ರವರೆಗೆ ನಡೆಯುವ ಸುಸಂದರ್ಭದಲ್ಲಿ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಅತ್ಯಂತ ಸಂತಸದ ಸಂಗತಿಯಾಗಿದೆ.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ವಿಶ್ವಭ್ರಾತೃತ್ವದೊಂದಿಗೆ ಕೌಶಲ್ಯಗಳನ್ನು ಪ್ರದರ್ಶಿಸುವ ಹಾಗೂ ಐಕ್ಯತೆಯನ್ನು ಬೆಳೆಸಿಕೊಳ್ಳಲು ಈ ಜಾಂಬೋರೇಟ್ ಉತ್ತಮ ವೇದಿಕೆಯಾಗುವುದು. ಇದರಿಂದಾಗಿ ನಾಯಕತ್ವಗುಣ, ಸಹಕಾರ ಮನೋಭಾವ, ಸಾಮಾಜಿಕ ಮೌಲ್ಯ, ಸ್ನೇಹಭಾವ, ಹೊಂದಿಕೊಳ್ಳುವ ಗುಣವನ್ನು ಅಭಿವೃದ್ಧಿಪಡಿಸಿಕೊಳ್ಳಲು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಅನುವು ಮಾಡಿಕೊಡುತ್ತದೆ. ಸಾಹಸಮಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು, ಸಮುದಾಯ ಸೇವೆ, ವ್ಯಾಯಾಮ ಪ್ರದರ್ಶನ, ಪಥಸಂಚಲನ, ನಗರ ಮೆರವಣಿಗೆ ಮುಂತಾದ ಕಾರ್ಯಕ್ರಮಗಳು ಜಾಂಬೋರೇಟ್‌ನಲ್ಲಿ ಒಳಗೊಂಡಿರುವುದು ಹೆಮ್ಮೆಯ ಸಂಗತಿ.

ಉದ್ದೇಶಿತ ಜಾಂಬೋರೇಟ್ ಯಶಸ್ವಿಯಾಗಿ ನೆರವೇರಲಿ ಮತ್ತು ಸ್ಮರಣ ಸಂಚಿಕೆಯು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಉಪಯುಕ್ತವಾಗುವ ಮಾಹಿತಿಗಳನ್ನು ಒಳಗೊಂಡು ಸುಂದರ ರೂಪದಲ್ಲಿ ಹೊರಬರಲಿ ಎಂದು ಹಾರೈಸುತ್ತೇನೆ.

16/12/19

**(ಎಸ್.ಆರ್. ಉಮಾಶಂಕರ್)**






**ಬಿ.ಹೆಚ್. ಅನಿಲ್ ಕುಮಾರ್,** ಭಾ.ಆ.ಸೇ.
ಆಯುಕ್ತರು

ಎನ್.ಆರ್. ವೃತ್ತ, ಬೆಂಗಳೂರು - 560 002
ದೂರವಾಣಿ: 080-22237455; 080-22221286
ಫ್ಯಾಕ್ಸ್ : 080-22223194
ಇ-ಮೇಲ್: comm@bbmp.gov.in

ಸಂಖ್ಯೆ: ಬಿಬಿಎಂಪಿ/ಆಯುಕ್ತರು/ಪಿಎಸ್ಆರ್(4)/9468/2019-20 ದಿನಾಂಕ: 21-12-2019

# ಸಂದೇಶ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಿಂದ ದಿನಾಂಕ 27 ಡಿಸೆಂಬರ್ 2019 ರಿಂದ 02 ಜನವರಿ 2020ರ ವರೆಗೆ 28ನೇ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಹಮ್ಮಿಕೊಂಡಿರುವುದು ಸಂತೋಷಕರ ವಿಷಯ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ಯುವಪೀಳಿಗೆ ಅದರಲ್ಲೂ ವಿದ್ಯಾರ್ಥಿಗಳು ತಮ್ಮ ಕೌಶಲ್ಯವನ್ನು ಅಭಿವೃದ್ಧಿಪಡಿಸಿಕೊಳ್ಳಲು ಹಾಗೂ ವಿಶ್ವಭ್ರಾತೃತ್ವವನ್ನು, ನಾಯಕತ್ವಗುಣ, ಸಹಕಾರ ಮತ್ತು ಸೇವಾ ಮನೋಭಾವ ಐಕ್ಯತೆಯನ್ನು ಬೆಳೆಸಿಕೊಳ್ಳಲು ಉತ್ತಮ ಅವಕಾಶವನ್ನು ಕಲ್ಪಿಸಿಕೊಡುತ್ತಿರುವುದು ಶ್ಲಾಘನೀಯ. ಈ ನಿಟ್ಟಿನಲ್ಲಿ ದೊಡ್ಡಬಳ್ಳಾಪುರದಲ್ಲಿ ಜಾಂಬೋರೇಟ್ ಏರ್ಪಡಿಸಿ, ತನ್ಮೂಲಕ ವ್ಯಾಯಾಮ ಪ್ರದರ್ಶನ, ಪಥಸಂಚಲನ,

ನಗರ ಮೆರವಣಿಗೆ, ಸಾಹಸಮಯ ಚಟುವಟಿಕೆಗಳು ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು,

ಈ ಸಮಾವೇಶದಲ್ಲಿ 6000 ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು 35 ಶೈಕ್ಷಣಿಕ ಜಿಲ್ಲೆಗಳಿಂದ ಹಾಗೂ ನೆರೆ ರಾಜ್ಯಗಳಿಂದ ಭಾಗವಹಿಸಲು ಅವಕಾಶವನ್ನು ಕಲ್ಪಿಸಿಕೊಟ್ಟಿರುವುದು ಹಾಗೂ ಈ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ವತಿಯಿಂದ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಸಂತಸದ ಸಂಗತಿ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕಾರ್ಯಕ್ರಮಗಳಿಂದ ರಾಜ್ಯದ ಹಾಗೂ ದೇಶದ ಯುವಕ-ಯುವತಿ ವಿದ್ಯಾರ್ಥಿಗಳು ಪ್ರಯೋಜನ ಪಡೆದುಕೊಳ್ಳುವಂತಾಗಲೆಂದು, ಸಂಸ್ಥೆ ವತಿಯಿಂದ ಹಮ್ಮಿಕೊಂಡಿರುವ ಜಾಂಬೋರೇಟ್ ಯಶಸ್ವಿಯಾಗಿ ನೆರವೇರಲೆಂದು ಹಾಗೂ ಈ ಶುಭ ಸಂದರ್ಭದಲ್ಲಿ ಹೊರತರುತ್ತಿರುವ ಸ್ಮರಣ ಸಂಚಿಕೆಯು ಉತ್ತಮವಾಗಿ ಮೂಡಿಬರಲೆಂದು ಆಶಿಸುತ್ತೇನೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಅಭಿವೃದ್ಧಿ ಹೊಂದಲು ಶ್ರಮಿಸುತ್ತಿರುವ

ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ಹಾಗೂ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೆ ಮತ್ತು ಸಮಾವೇಶದ ಎಲ್ಲಾ ಸಂಘಟಕರಿಗೂ ನನ್ನ ಹಾರ್ದಿಕ ಶುಭಾಶಯಗಳನ್ನು ತಿಳಿಸಲಿಚ್ಛಿಸುತ್ತೇನೆ.

(ಬಿ.ಹೆಚ್. ಅನಿಲ್ ಕುಮಾರ್)
ಆಯುಕ್ತರು






**ಡಾ. ಕೆ.ಜಿ. ಜಗದೀಶ,** ಭಾ.ಆ.ಸೇ.
ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ

ಸಂಖ್ಯೆ: ಮುಕಾ/1143/2019 ದಿನಾಂಕ: 05-12-2019

# ಸಂದೇಶ

ಮಕ್ಕಳು ನಾಲ್ಕು ಗೋಡೆಗಳ ನಡುವೆ ಓದು-ಬರಹವನ್ನು ಕಲಿಯುವುದರ ಜೊತೆಗೆ, ಪ್ರಕೃತಿಯ ಮಡಿಲಲ್ಲಿ ಒಂದಾಗಿ ಬೆರೆತು, ಸಮನ್ವಯದಿಂದ ಬಾಳಲು ಪ್ರೇರೇಪಿಸುವ ಉನ್ನತ ಉದ್ದೇಶವನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಹೊಂದಿದೆ. ಮಕ್ಕಳಲ್ಲಿ ಪರಿಸರ ಪ್ರಜ್ಞೆ ಮತ್ತು ಸಂಸ್ಕೃತಿಯ ಅರಿವನ್ನು ಮೂಡಿಸಿ ಅವರ ವ್ಯಕ್ತಿತ್ವ ವಿಕಸನದ ಜತೆಗೆ ಕಲಿಕೆಯಲ್ಲೂ ಪ್ರಗತಿ ಸಾಧಿಸುವ ಕೆಲಸವನ್ನು ಸ್ಕೌಟ್ಸ್ ಮತ್ತು ಗೈಡ್ಸ್ ಮಾಡುತ್ತಿದೆ.

28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಕಾರ್ಯಕ್ರಮವನ್ನು ಡಾ. ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ಆಯೋಜಿಸಿರುವುದು ಸಂತಸದ ವಿಷಯ.

ವಿಶ್ವ ಭ್ರಾತೃತ್ವದೊಂದಿಗೆ ಮತ್ತು ಐಕ್ಯತೆಯನ್ನು ಬೆಳೆಸಿಕೊಳ್ಳಲು ಅವಕಾಶ ನೀಡುವುದರ ಜೊತೆಗೆ ಮಕ್ಕಳಲ್ಲಿ ನಾಯಕತ್ವ ಗುಣ, ಸಹಕಾರ ಮತ್ತು ಸೇವಾ ಮನೋಭಾವ ಮತ್ತು ಇತರರೊಂದಿಗೆ ಹೊಂದಿಕೊಳ್ಳುವ ಗುಣವನ್ನು ಈ ಶಿಬಿರ ಬೆಳೆಸುತ್ತದೆ. ರಾಜ್ಯದ 35 ಶೈಕ್ಷಣಿಕ ಜಿಲ್ಲೆಗಳಿಂದ 6000 ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸುತ್ತಿರುವ ಈ ಕಾರ್ಯಕ್ರಮದಲ್ಲಿ ಬಿಡುಗಡೆ ಮಾಡುವ ಸ್ಮರಣ ಸಂಚಿಕೆಯು ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸಂಬಂಧಿಸಿದ ಅಮೂಲ್ಯ ಲೇಖನಗಳನ್ನು ಮತ್ತು ಶಿಬಿರಾರ್ಥಿಗಳ ಅನುಭವಗಳೊಂದಿಗೆ ಉತ್ತಮವಾಗಿ ಮೂಡಿಬರಲಿ. ಮುಂದಿನ ಪೀಳಿಗೆಗೆ ಉತ್ತಮ ನಾಗರಿಕರನ್ನು ನಿರ್ಮಾಣ ಮಾಡುವ ಕೆಲಸ ಸ್ಕೌಟ್ಸ್ ಮತ್ತು ಗೈಡ್ಸ್‌ನಿಂದ ಆಗಲಿ ಎಂದು ಆಶಿಸುತ್ತಾ ಈ ಕಾರ್ಯಕ್ರಮವು ಯಶಸ್ವಿಯಾಗಿ ನಡೆಯಲಿ ಎಂದು ಶುಭಕೋರುತ್ತೇನೆ.

(ಡಾ|| ಕೆ.ಜಿ. ಜಗದೀಶ)
ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ






**ಡಾ. ರೇಜು ಎಂ.ಟಿ.,** ಭಾ.ಆ.ಸೇ.
ರಾಜ್ಯ ಯೋಜನಾ ನಿರ್ದೇಶಕರು
ಸಮಗ್ರ ಶಿಕ್ಷಣ–ಕರ್ನಾಟಕ

ಹೊಸ ಸಾರ್ವಜನಿಕ ಕಛೇರಿಗಳ ಪೂರಕ ಕಟ್ಟಡ
ನೃಪತುಂಗ ರಸ್ತೆ, ಬೆಂಗಳೂರು–560001
ದೂರವಾಣಿ: (ಕ): 080–22483040
ಇ–ಮೇಲ್: spdssakarnataka@gmail.com

ದಿನಾಂಕ: 17–12–2019

# ಸಂದೇಶ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯು 28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್ನು ದಿನಾಂಕ 27.12.2019ರಿಂದ 02.01.2020ರವರೆಗೆ ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಆಯೋಜಿಸುತ್ತಿದ್ದು, ಜಾಂಬೋರೇಟ್‌ನ ಸಮಿತಿಯು ಹೊರತರುತ್ತಿರುವ "ಸ್ಮರಣ ಸಂಚಿಕೆ"ಗೆ ಹಾರ್ದಿಕ ಶುಭಾಶಯಗಳನ್ನು ಕೋರುತ್ತೇನೆ.

ಶಿಸ್ತು, ಉತ್ತಮ ನಡವಳಿಕೆ ಇವುಗಳು ಮನುಷ್ಯನ ಜೀವನದಲ್ಲಿ ಇರಬೇಕಾಗಿರುವ ಗುಣಗಳು, ಸಾಹಸಮಯ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳು, ಸಮುದಾಯ ಸೇವೆ, ವ್ಯಾಯಾಮ ಪ್ರದರ್ಶನ, ಪಥಸಂಚಲನ, ನಗರ ಮೆರವಣಿಗೆ, ಪ್ರೇಕ್ಷಣೀಯ ಸ್ಥಳಗಳ ದರ್ಶನ ಮುಂತಾದ ಕಾರ್ಯಕ್ರಮಗಳಿಂದ ಸ್ಕೌಟ್ಸ್–ಗೈಡ್ಸ್‌ಗಳಲ್ಲಿ ಶಿಸ್ತು, ನಾಯಕತ್ವ ಗುಣ, ಸೇವಾ ಮನೋಭಾವ, ಸಾಮಾಜಿಕ ಮತ್ತು ನೈತಿಕ ಮೌಲ್ಯಗಳು, ಸ್ನೇಹಭಾವ ಮತ್ತು ಹೊಂದಿಕೊಳ್ಳುವ ಗುಣಗಳು ಬೆಳೆದು ಬರುವುದರಿಂದ ಇವರು ನಮ್ಮ ದೇಶದ ಉತ್ತಮ ಪ್ರಜೆಗಳಾಗುವುದರಲ್ಲಿ ಹಾಗೂ ಶಿಸ್ತಿನ ಸಿಪಾಯಿಗಳಾಗುವುದರಲ್ಲಿ ಯಾವುದೇ ಸಂದೇಹವಿಲ್ಲ. ಈ ಗುಣಗಳನ್ನು ಮನುಷ್ಯನ ಜೀವನದಲ್ಲಿ ಅಳವಡಿಸಿಕೊಳ್ಳಲು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿರುವುದು ತುಂಬಾ ಶ್ಲಾಘನೀಯವಾಗಿರುವ ಸಂಗತಿಯಾಗಿದೆ.

ಈ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಸಂಸ್ಥೆಯ 28ನೇ ಕರ್ನಾಟಕ ರಾಜ್ಯ ಜಾಂಬೋರೇಟ್ ಕಾರ್ಯಕ್ರಮ ಯಶಸ್ವಿಯಾಗಲೆಂದು ಹಾರೈಸುತ್ತೇನೆ.

(ಡಾ. ರೇಜು ಎಂ.ಟಿ.)

# The Bharat Scouts and Guides, Karnataka

# 28th Karnataka State Scouts and Guides Jamborette

**(27.12.2019 to 02.01.2020)**

Jamborette Chief : **Sri R. Chandrashekharan,** Vice-President
Bharat Scouts and Guides, Bengaluru North District

## HOSPITALITY AND RECEPTION COMMITTEE

Chairman - **Smt. P. Saroja,** District Chief Commissioner, B'luru North District
Members - **Sri P.N. Ravindra,** Deputy Commissioner, B'luru Rural District
**Sri Ravi D. Chennanavar,** Superintendent of Police, B'luru Rural District
**Sri M.N. Nagaraju,** Chief Executive Office, Zilla Panchayath, B'luru Rural
**Sri K. Gangappa Gowda,** State Secretary, BS&G, Karnataka
**Sri B.K. Basavaraja,** Joint State Secretary (Scouts), BS&G, Karnataka
**Sri Nagaraj,** District Chief Commissioner, B'luru Rural District

## FINANCE COMMITTEE

Chairman - **Sri P.G.R. Sindhia,** State Chief Commissioner, BS&G, Karnataka
Members - **Sri B.R. Prasannakumar,** Secretary, R.T.Nagar School, Bengaluru
**Sri K. Gangappa Gowda,** State Secretary, BS&G, Karnataka
**Sri Prabhudeva J. Chigateri,** State Treasurer, BS&G, Karnataka
**Sri K. Narasimhamurthy,** Hqrs. Commissioner (S),BS&G, Karnataka
**Sri B.K. Sheshadri,** District Secretary, B'luru North District

## INFRASTRUCTURE COMMITTEE

Chairman - **Sri B.K. Basavaraja,** Joint State Secretary (Scouts), BS&G, Karnataka
Members - **Sri A.S. Madhusudhan,** Programme Co-ordinator of the Jamborette & Deputy International Commissioner (S), NHQ, New Delhi.
**Sri Nagaraj,** District Chief Commissioner, B'luru Rural, District
**Sri L.T. Lokesh,** Assistant Secretary, BS&G, Karnataka
**Sri P. Chandru,** District Organisor, Bengaluru South District

## PROGRAMME COMMITTEE

Chairman - **Sri A.S. Madhusudhan,** Programme Co-ordinator of the Jamborette & Deputy International Commissioner (S), NHQ, New Delhi.
Members - **Smt. P. Saroja,** District Chief Commissioner
- **Sri M. Prabhakar Bhat,** SOC(S), BS&G, Karnataka
**Smt. C. Manjula,** SOC(G), BS&G, Karnataka
**Smt. K.V. Shamala,** STC(G), BS&G, Karnataka

## ADVENTURE AND FUN ACTIVITIES

Leader - **Sri Jimmy Sequira,** District Commissioner (S), Kodagu, District
**Sri Baburao Nimbore,** District Trg. Commr.(S), Bidar, District
**Sri T.S. Shivanna,** LT(S), Davanagere, District

**Sri Hariprasada M.K.,** Daksina Kannada District
**Sri Dashith N.,** Daksina Kannada District
**Sri Sampath Kumar B.L.,** Daksina Kannada Dist.
**Sri Prathik P.,** Daksina Kannada District
**Sri Pruthvi H.D.,** Daksina Kannada District
**Sri Ravi J.,** Udupi District
**Sri Suketh C.,** Udupi District
**Sri Jagannaik V.N.,** Madhugiri District
**Sri Dharanesha C.K.,** RSL., Tiptur District
**Sri Girish N.,** Madhugiri District
**Sri Vinay M.C.,** Tiptur District
**Sri B.N. Vinay Kumar,** Kolar District
**Sri Vinith Reddy,** Bengaluru North District
**Sri Prasanna Bhat,** Udupi District
**Sri Sunil,** Daksina Kannada District
**Sri Shrivarsha H.R.,** Daksina Kannada District
**Sri Changappa T.P.,** Daksina Kannada District
**Sri Yoganand B.S.,** Daksina Kannada District
**Sri Sukeerth Hegde,** Udupi District
**Sri K.M. Saikiran,** Udupi District
**Sri Sumantha,** Udupi District
**Sri Shivkumar T.A.,** Madhugiri District
**Sri Anil Kumar M.,** Madhugiri District
**Sri Lohitha M.,** Tiptur District
**Sri Rajshekhar S.,** Bengaluru North District
**Sri Vilas Gowda K.B.,** Bengaluru North District
**Sri Manu S.J.,** Bengaluru North District
**Sri Shankare Gowda S.,** Mandya District
**Sri Rajashekar A.S.,** Mandya District

## EXHIBITION COMMITTEE

Chairman - **Sri K. Gangappa Gowda,** State Secretary, BS&G, Karnataka
Members - **Smt. B.D. Shantha,** Asst. State Commissioner (G), BS&G, Karnataka.
**Sri A.L. Shaikh Suranagi,** State Training Commissioner(S), BS&G, Karnataka
**Sri J. Chakravarthi,** LT(S), Former Dist. Secretary, Bengaluru South District
**Smt. Pushpa Vijaya,** Bengaluru
**Sri Ajaya Kumar Jain,** Mysuru District
**Smt. Bharathi Chakravarthi,** Bengaluru

## GOLBAL DEVELOPMENT VILLAGE

**Sri M.V. Janardhan,** LT(S), District Secretary, Kolar, District
**Smt. Malleshwari Jujare,** ASOC(G), Bellary & Koppal, District
**Sri T.K. Narayanswamy,** DTC, Bengaluru South

## HIKE

**Sri K.S. Prathimkumar,** LT(S), Dakshina Kannada District
**Smt. Bharathi Dias,** ASOC(G), Shivamogga District
**Sri Rachotaiah,** DO(S), Bidar District
**Smt. Nagarathna Patil,** DO(G), Yadagiri District

## COMMUNITY DEVELOPMENT

**Sri M.S. Prakash,** DTC(S), Hassan District
**Smt. Kanchanamala,** Senior Guider, Hassan District
**Sri Girish,** Rover Scout Leader, Hassan District
**Sri Sunil,** SGV, Madhugiri District

## FAITH & BELIEF

**Sri Sharofff Madappa,** District Commissioner (S), Chamarajanagara Dist.
**Smt. B.D. Shantha,** ASC(G), BS&G, Karnataka
**Smt. N.K. Chaya,** Headquarters Commr. (G), BS&G, Karnataka
**Sri Y.S. Veerabhadraiah,** Former DOC(S), Kalaburagi District

## BETTER WORLD VILLAGE

**Sri E. Sarathraj,** Asst. Supply Service Officer, NHQ, New Delhi
**Sri Krran Krishna,** World Youth Representetive Wosh
**Sri Karthik .R,** Solor Ambassader, Bengaluru South
**Sri Prabhashree,** Ranger Leader, Daksina Kannada
**Sri Kushal Kumar,** Rover Leader, Bengalore North

## DAY VISITORS

**Sri T. Siddagangaiah,** Vijayanagar LA Secretary, Bengaluru South District

## FOOD COMMITTEE

Chairman - **Sri M.S. Satheesh,** District Secretary, B'luru South District

Members - **Sri Ramegowda,** Former Deputy Mayor, BBMP, Bengaluru

**Sri G.S. Vishalaksha** (Ravi Kabadia), Member, BS&G, State Council

**Smt. Arunamala,** ASTC(G), Doddaballapura Training & Camping Centre.

**Sri V. Babu,** DOC(S), Kolar District

**Sri T. Karisiddappa,** ASOC(S)

**Sri P. Manjunathappa,** LT(S), Hosapete, Bellary

**Sri Jayaraj Boosad,** Koppal District

**Sri Thippesh,** SGV, Bellary District

**Sri Pramod,** SGV, Yadagiri District

## HEALTH COMMITTEE

Chairman - **Sri P.G.R. Sindhia,** State Chief Commissioner

Members - **The District Health Officer,** B'luru Rural District

**Dr. Jagadish,** Abhaya Nursing Home, Wilson Garden, Bengaluru

**Dr. Somashekhar,** Bengaluru North District

**Dr. K.B. Gurumurthy,** Dist. Treasurer, Mysuru District

**The Health Inspector,** Doddaballapura

**Sri C.A. Savalagi,** District Secretary, Bagalakote District

**Sri Anand,** State Council Member, BS&G, Karnataka

## WATER AND SANITATION COMMITTEE

Chairman - **Sri M.K. Khan,** District Chief Commissioner, B'luru South District.

Members - **Sri Nithin Amin,** DO, Udupi District

**Sri P. Chandru,** DO, Bengaluru South District

**Sri M. Narayanaswamy,** Quarter Master, Dr. Annie Besant Trg. Centre

**Sri Naveen,** SGV, Chikkamagaluru District

## TRANSPORT & SIGHT SEEING COMMITTEE

Chairman - **Sri Varaprasad,** District Chief Commissioner, Mandya District

Members - **Sri B.S. Ananth,** Asst. Secretary, Bengaluru South District

**The RTO,** Doddaballapura, Bengaluru Rural District.

**Depot Manager,** KSRTC, Doddaballapura

**Sri Keerthi,** Rover, Mandya

## ACCOMMODATION COMMITTEE

**Sri O. Manjappa,** Warden, Kondajji Trg. Centre, Davanagere Dist.

**Sri Siddappa Poojar,** ASOC(S), Dharwad, District

**Smt. Suman Shekar,** DO(G), Udupi, District

## SOUVENIR COMMITTEE

Chairman - **Sri Kondajji B. Shanmukhappa,** Vice-President, BS&G, Karnataka

Members - **Sri N. Srinivasan,** Asst. State Commissioner, (S), BS&G, Karnataka

**Sri M.A. Chellaiah,** Nodal Officer, BBMP

**Sri C.P. Parameshwar,** Member, Souvenir Committee
**Smt. Kamalakshi Hegade,** Member, Souvenir Committee
**Sri Udayarathnakumar,** Principal, Nisarga English School, B'luru
**Sri K.H. Jayaramaiah,** PRO, BS&G, Karnataka
**Sri V. Thippesway,** Equipment Department, SHQ, Bengaluru

## MEMENTOS & GIFT COMMITTEE

Chairman - **Smt. Geetha Nataraj,** State Commissioner (G), BS&G, Karnataka
Members - **Smt. P. Saroja,** District Chief Commissioner, Bengaluru North District
**Smt. B.V. Ramalatha,** Joint State Secretary(G), BS&G, Karnataka
**Smt. K.V. Shamala,** State Training Commissioner(G), BS&G, Karnataka

## PUBLICITY AND MEDIA COMMITTEE

Chairman - **Sri Mohan Kumar Kondajji,** ASC(S), BS&G, Karnataka, Bengaluru
Members - **Sri M.A. Chellaiah,** Nodal Officer, BBMP District, Bengaluru
**Prof. Chandrashekharaiah,** Dr. Annie Besant Trg. Centre, Doddaballapura
**Smt. B.V. Ramalatha,** Joint State Secretary (G), BS&G, Karnataka
**Sri H.C. Shivaraj,** Hunasanahalli, Ramanagara

## SAFETY AND SECURITY COMMITTEE

Chairman - **Sri A.N. Narendrakumar,** Dist. Secretary, B'luru East District
Members - **Sri M.A. Boregowda,** Asst. Prof. GFGC, KRS, Mandya
**Sri K. Shivaraj,** Phy. Edn. Director,GFGC.Halli Mysuru, H.N.Pura
**Sri S.H. Mallapur,** Lecturer, Govt. FGC. Gadag
**Sri Ashok,** District Organisor, Mysuru District

## 42ND CUBS & BULBULS UTSAV

**Leader of the**
Cub Section - **Sri L.T. Lokesh,** LT(C) Assistant Secretary, BS&G, Karnataka
Bulbul Section - **Smt. Jayashree Joshi,** LT(B), BS&G, Bellary District
Co-ordinator - **Smt. Malleshwari Jujare,** LT(G) & ASOC(G), BS&G, Koppal District
Members - **Smt. Sandhyarani,** LT(C), BS&G, Chickmagaluru District
**Sri Muninarayanappa,** LT(C), Kolara District
**Sri Narayanaswamy,** LT(C), Kolara District
**Smt. Palaksh .Y,** Dist. Commissioners (S), Hassan District

## CENTENARY CELEBRATIONS OF RANGERING

Chairman : **Smt. Geetha Nataraj,** State Commissioner (Guides), BS&G, Karnataka
Members **Smt. B.V. Ramalatha,** Joint State Secretary (Guides), BS&G, Karnataka
**Smt. Shantha V. Acharya,** DCC, Udupi District
**Smt. P. Saroja,** DCC, Bengaluru North District
**Smt. Asha Prasannakumar,** DCC, Tumakuru District
**Smt. Madhuri Deodhar,** DCC, Haveri District
**Smt. Aziza Sulthana,** DCC, Raichur District
**Smt. Radha Venkatesh,** ASC(G), BS&G, Karnataka
**Smt. C. Manjula,** SOC(G), BS&G, Karnataka
**Smt. K.V. Shamala,** STC(G), BS&G, Karnataka
**Smt. H.K. Jyothi,** LT(G), Bengaluru North District

# ದೇವನೊಬ್ಬ ನಾಮ ಹಲವು

28th KARNATAKA STATE
JAMBORETTE
Host : Bangalore North District

Unlock The Future

27 DEC 2019 - 2 JAN 2020
DR. ANNIE BESANT SCOUT GUIDE CAMPING & TRAINING CENTER
DODDABALLAPUR, BANGALORE RURAL
The Bharat Scouts and Guides

## ಸರ್ವಧರ್ಮ ಪ್ರಾರ್ಥನಾ ಸಮಾರಂಭ



**01** ಜನವರಿ **2020**ರಂದು **28**ನೇ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್‌ನ ಸರ್ವಧರ್ಮ ಪ್ರಾರ್ಥನಾ ಸಮಾರಂಭದಲ್ಲಿ ಭಾಗವಹಿಸಿದ್ದ ಭಾರತದ ಸನ್ಮಾನ್ಯ ಮಾಜಿ ಪ್ರಧಾನ ಮಂತ್ರಿಗಳಾದ ಶ್ರೀ ಹೆಚ್.ಡಿ. ದೇವೇಗೌಡ ಶ್ರೀ ಶ್ರೀ ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಸುತ್ತೂರು ಮಹಾಸಂಸ್ಥಾನ ಮಠ, ಮೈಸೂರು, ಡಾ॥ ಗೊ.ರು. ಚನ್ನಬಸಪ್ಪ, ಹಿರಿಯ ಸಾಹಿತಿಗಳು, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಶ್ರೀ ಯು.ಟಿ. ಖಾದರ್, ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಇಲಾಖೆ ಮಾಜಿ ಸಚಿವರು ಮತ್ತು ಶಾಸಕರು, ಶ್ರೀ ಎಲ್.ಎನ್. ನಿಸರ್ಗ ನಾರಾಯಣಸ್ವಾಮಿ, ಮಾನ್ಯ ಶಾಸಕರು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷರು, ಶ್ರೀ ಎ. ಪಿ. ರಂಗನಾಥ್, ಬೆಂಗಳೂರು ವಕೀಲರ ಸಂಘದ ಅಧ್ಯಕ್ಷರು, ಡಾ॥ ಅಬ್ದುಲ್ ಖದೀರ್, ಶಿಕ್ಷಣ ತಜ್ಞರು, ಬೀದರ್, ಶ್ರೀ ಆರ್. ಚಂದ್ರಶೇಖರನ್, ಜಾಂಬೋರೇಟ್ ಚೀಫ್ ಶ್ರೀ ಕೆ. ಗಂಗಪ್ಪ ಗೌಡ, ರಾಜ್ಯ ಕಾರ್ಯದರ್ಶಿ, ಜಿಲ್ಲಾ ಮುಖ್ಯ ಆಯುಕ್ತರುಗಳಾದ ಶ್ರೀ ಎಂ.ಎಂ. ಲೋಂಡೆ, ಶ್ರೀಮತಿ ಪಿ. ಸರೋಜ, ಶ್ರೀ ಎಂ.ಕೆ. ಖಾನ್ ಹಾಗೂ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಉಪಸ್ಥಿತರಿದ್ದರು.

28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್‌ನ ಮಹಾದ್ವಾರ
ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ

28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್‌ನ ಮುಖ್ಯದ್ವಾರ



ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪನವರು, ಮುಖ್ಯಮಂತ್ರಿಗಳು ಮತ್ತು ಅಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಅವರು ಜ್ಯೋತಿ ಬೆಳಗಿಸುವುದರ ಮೂಲಕ 28ನೇ ರಾಜ್ಯ ಜಾಂಬೋರೇಟನ್ನು 27 ಡಿಸೆಂಬರ್ 2019ರಂದು ಉದ್ಘಾಟಿಸಿದರು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಎಸ್. ಸುರೇಶ್‌ಕುಮಾರ್, ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಶ್ರೀ ಸಿ.ಟಿ. ರವಿ, ರಾಷ್ಟ್ರೀಯ ಸಂಸ್ಥೆಯ ಅಧ್ಯಕ್ಷರಾದ ಡಾ॥ ಅನಿಲ್ ಕುಮಾರ್ ಜೈನ್, ವಿಧಾನಸಭಾ ಸದಸ್ಯರುಗಳಾದ ಶ್ರೀ ಎಸ್.ಆರ್. ವಿಶ್ವನಾಥ್, ಶ್ರೀ ಟಿ. ವೆಂಕಟರಮಣಯ್ಯ, ಶ್ರೀ ಯು.ಟಿ. ಖಾದರ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಲೋಕಸಭಾ ಸದಸ್ಯರಾದ ಶ್ರೀ ಪಿ.ಸಿ. ಮೋಹನ್, ಪೋಸ್ಟ್ ಮಾಸ್ಟರ್ ಜನರಲ್ ಶ್ರೀ ಡಿ.ಎಸ್.ವಿ.ಆರ್. ಮೂರ್ತಿ, ವಿಧಾನ ಪರಿಷತ್ ಸದಸ್ಯರುಗಳಾದ ಶ್ರೀ ಪುಟ್ಟಣ್ಣ, ಶ್ರೀ ಅ. ದೇವೇಗೌಡ, ರಾಜ್ಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಿಲ್ಲಾಧಿಕಾರಿಗಳಾದ ಶ್ರೀ ಪಿ.ಎನ್. ರವೀಂದ್ರ, ತಾಲ್ಲೂಕು ಪಂಚಾಯಿತಿ ಅಧ್ಯಕ್ಷರಾದ ಶ್ರೀ ಡಿ.ಸಿ. ಶಶಿಧರ್ ಹಾಗು ಇತರ ಗಣ್ಯರುಗಳು ಉಪಸ್ಥಿತರಿದ್ದರು.



ಜಾಂಬೋರೇಟ್ ಆವರಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ರಾಜ್ಯ ಪೊಲೀಸ್ ಇಲಾಖೆಯ ಬ್ಯಾಂಡ್‌ನಿಂದ ಗೌರವ ವಂದನೆಯನ್ನು ಸ್ವೀಕರಿಸಿದರು.

ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರು ಹಾಗು ರಾಷ್ಟ್ರೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ರಾಜ್ಯಸಭಾ ಸದಸ್ಯರಾದ ಡಾ॥ ಅನಿಲ್‌ಕುಮಾರ್ ಜೈನ್, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಎಸ್. ಸುರೇಶ್‌ಕುಮಾರ್ ಹಾಗೂ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು 28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟ್ ಉದ್ಘಾಟನಾ ಕಾರ್ಯಕ್ರಮದ ನಂತರ ತೆರೆದ ಜೀಪಿನಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಗೌರವ ವಂದನೆ ಸ್ವೀಕರಿಸಿದರು.

ಜಾಂಬೋರೇಟ್‌ನ ಉದ್ಘಾಟನಾ ಸಮಾರಂಭದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಮತ್ತು ಸ್ಕೌಟರ್ಸ್-ಗೈಡರ್ಸ್‌ಗಳ ವಿಹಂಗಮ ನೋಟ.

ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪನವರಿಗೆ ಹಾಗೂ ಇತರ ಗಣ್ಯರುಗಳಿಗೆ
ಭಾರತೀಯ ಸೇನಾ ವಾದ್ಯಗೋಷ್ಠಿಯ ತಂಡದಿಂದ ಗೌರವ ವಂದನೆ ಸಲ್ಲಿಸುತ್ತಿರುವುದು.

ಜಾಂಬೋರೇಟ್ ಉದ್ಘಾಟನಾ ಸಮಾರಂಭದಲ್ಲಿ ಭಾರತೀಯ ಸೇನಾ ತಂಡದವರು
ಬೈಕ್‌ರ್‍ಯಾಲಿ ಪ್ರದರ್ಶನವನ್ನು ನೀಡುತ್ತಿರುವುದು.



28ನೇ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್ ಯೂಥ್‌ಪಾರ್ಲಿಮೆಂಟ್‌ನ ಯುವಸಂಸತ್ತಿನಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಶ್ರೀ ಕೆ.ಆರ್. ರಮೇಶ್‌ಕುಮಾರ್, ಮಾನ್ಯ ಮಾಜಿ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ ಮತ್ತು ಶಾಸಕರು, ಶ್ರೀ ಯು.ಟಿ. ಖಾದರ್ ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಇಲಾಖೆಯ ಮಾಜಿ ಸಚಿವರು ಮತ್ತು ಶಾಸಕರು, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಹಾಗೂ ಇತರರು ಉಪಸ್ಥಿತರಿದ್ದಾರೆ.



ಶ್ರೀ ಪಿ.ಎನ್. ರವೀಂದ್ರ, ಮಾನ್ಯ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು 28ನೇ ಕರ್ನಾಟಕ ರಾಜ್ಯ ಜಾಂಬೋರೇಟ್‌ನಲ್ಲಿ ಆಯೋಜಿಸಲಾಗಿದ್ದ 'ಚಾಲೆಂಜಿಗ್ ವ್ಯಾಲಿ' ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ & ಗೈಡ್ಸ್, ಕರ್ನಾಟಕ, ಶ್ರೀಮತಿ ನಿರ್ಮಲಾ ಎಲಿಗಾರ್, ನಿರ್ದೇಶಕರು, ಬೆಂಗಳೂರು ಆಕಾಶವಾಣಿ ಕೇಂದ್ರ, ಶ್ರೀ ಕೆ. ಗಂಗಪ್ಪಗೌಡ ರಾಜ್ಯ ಕಾರ್ಯದರ್ಶಿ, ಶ್ರೀ ಬಿ.ಕೆ. ಬಸವರಾಜ, ಜಂಟಿ ರಾಜ್ಯ ಕಾರ್ಯದರ್ಶಿ(ಸ್ಕೌಟ್ಸ್), ಶ್ರೀ ಎ.ಎಸ್. ಮಧುಸೂದನ್, ಉಪ ಅಂತರರಾಷ್ಟ್ರೀಯ ಆಯುಕ್ತರು(ಸ್ಕೌಟ್ಸ್), ನವದೆಹಲಿ, ಶ್ರೀ ಜಿಮ್ಮಿಸಿಕ್ವೇರ, ಶ್ರೀ ನಾಗರಾಜ, ತೋಟಗಾರಿಕೆ ಇಲಾಖೆಯ ನಿವೃತ್ತ ಜಂಟಿ ನಿರ್ದೇಶಕರಾದ ಡಾ. ಹಿತ್ತಲಮನೆ ಹಾಗು ಇತರರು ಉಪಸ್ಥಿತರಿದ್ದರು.




MESSANGER OF PEACE ಕಾರ್ಯಕ್ರಮದಲ್ಲಿ ಶ್ರೀ ಪಿ.ಎನ್. ರವೀಂದ್ರ, ಮಾನ್ಯ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ನಿರ್ಮಲಾ ಎಲಿಗಾರ್, ನಿರ್ದೇಶಕರು, ಬೆಂಗಳೂರು ಆಕಾಶವಾಣಿ ಕೇಂದ್ರ, ಶ್ರೀಮತಿ ಗೀತಾ ನಟರಾಜ್ ರಾಜ್ಯ ಆಯುಕ್ತರು (ಗೈಡ್ಸ್), ಶ್ರೀಮತಿ ಸಿ. ಮಂಜುಳ, ರಾಜ್ಯ ಸಂಘಟನಾ ಆಯುಕ್ತರು (ಗೈಡ್ಸ್), ಶ್ರೀಮತಿ ಕೆ.ವಿ. ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ಶ್ರೀ ಶರತ್‌ರಾಜ್, ಅಸಿಸ್ಟೆಂಟ್ ಸಪ್ಲೈ ಆಫೀಸರ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ನವದೆಹಲಿ ಉಪಸ್ಥಿತರಿದ್ದಾರೆ.




28ನೇ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್‌ನ I LOVE SCOUTING ಕಾರ್ಯಕ್ರಮದಲ್ಲಿ ಶ್ರೀ ಆರ್.ವಿ. ದೇಶಪಾಂಡೆ, ಮಾನ್ಯ ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ ಮಾಜಿ ಸಚಿವರು ಮತ್ತು ಶಾಸಕರು, ಶ್ರೀ ಯು.ಟಿ. ಖಾದರ್, ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಇಲಾಖೆ ಮಾಜಿ ಸಚಿವರು ಮತ್ತು ಶಾಸಕರು, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷರು ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌ), ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈ), ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ ಮಾನ್ಯ ವಿಧಾನ ಪರಿಷತ್ ಸದಸ್ಯರು ಮತ್ತು ಸಹಾಯಕ ರಾಜ್ಯ ಆಯುಕ್ತರು (ಸ್ಕೌ), ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿಗಳು ಶ್ರೀ ಬಿ.ಕೆ. ಬಸವರಾಜ, ಜಂಟಿ ರಾಜ್ಯ ಕಾರ್ಯದರ್ಶಿಗಳು (ಸ್ಕೌ), ಶ್ರೀಮತಿ ಬಿ.ವಿ. ರಾಮಲತಾ, ಜಂಟಿ ರಾಜ್ಯ ಕಾರ್ಯದರ್ಶಿಗಳು (ಗೈ) ಶ್ರೀ ಎ.ಎಸ್. ಮಧುಸೂದನ್, ಉಪ ಅಂತರರಾಷ್ಟ್ರೀಯ ಆಯುಕ್ತರು (ಸ್ಕೌ) ನವದೆಹಲಿ, ಶ್ರೀ ರಾಮೇಗೌಡ, ಡಾ. ವಿ.ಎನ್. ವಾಸುದೇವ್ ಶ್ರೀ ವರಪ್ರಸಾದ್, ಡಾ॥ ವೈ.ಎಂ. ವೀರಭದ್ರಪ್ಪ, ಶ್ರೀ ಸುರೇಶ್ ಗುರೂಜಿ, ಶ್ರೀ ಜಿಮ್ಮಿಸಿಕ್ವೇರ ಹಾಗೂ ಇತರರು ಉಪಸ್ಥಿತರಿದ್ದರು.

ಜಿಲ್ಲೆಗಳ ಸಾಂಸ್ಕೃತಿಕ ಪ್ರದರ್ಶನ ಮತ್ತು ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಶ್ರೀ ಟಿ.ಎನ್. ಸೀತಾರಂ, ಕಿರುಚಿತ್ರಗಳ ಹೆಸರಾಂತ ನಿರ್ದೇಶಕರು, ಶ್ರೀಮತಿ ಜಿ.ವಿ. ರೇಣುಕ, ರಾಷ್ಟ್ರಪಶಸ್ತಿ ಪುರಸ್ಕೃತ ಸಾಹಿತಿಗಳು, ಶ್ರೀ ಯು.ಟಿ. ಖಾದರ್, ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಇಲಾಖೆ ಮಾಜಿ ಸಚಿವರು ಮತ್ತು ಶಾಸಕರು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಸಂಸ್ಥೆ ಉಪಾಧ್ಯಕ್ಷರು, ಶ್ರೀಮತಿ ಗೀತಾ ನಟರಾಜ್ ಡಾ॥ ಜಯಪ್ರಕಾಶ್ ಆಳ್ವಾ, ಶ್ರೀ ಬಿ.ಕೆ. ಬಸವರಾಜ, ಶ್ರೀ ಎಂ.ವಿ. ಜನಾರ್ದನ್, ಡಾ॥ ಬಿ.ಹೆಚ್. ಭರಶೆಟ್ಟಿ, ಸಂಸ್ಥೆಯ ದಾನಿಗಳಾದ ಶ್ರೀ ಕೆ.ಪಿ. ವೆಂಕಟೇಶಮೂರ್ತಿ, ಡಾ॥ ಕೆ.ಬಿ. ಗುರುಮೂರ್ತಿ, ರಾಜ್ಯ ಕಾರ್ಯಕಾರಿ ಸಮಿತಿ ಸದಸ್ಯರು ಹಾಗೂ ಇತರರು ಉಪಸ್ಥಿತರಿದ್ದರು.

ಕಲ್ಯಾಣ ಕರ್ನಾಟಕದ ಕಲಬುರಗಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಮತ್ತು ಸ್ಕೌಟರ್ಸ್-ಗೈಡರ್ಸ್‌ಗಳೊಂದಿಗೆ ಜಿಲ್ಲೆಗಳ ಸಾಂಸ್ಕೃತಿಕ ಪದರ್ಶನದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಸಕ್ರಿಯವಾಗಿ ಭಾಗವಹಿಸುತ್ತಿರುವುದು.

28ನೇ ಜಾಂಬೋರೇಟ್‌ನ ಸಂದರ್ಭದಲ್ಲಿ ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿರುವ "ಆಲಂಪಲ್ಲಿ ಆತ್ಮರಾಮಯ್ಯ ಶೆಟ್ಟಿಯವರ ಸ್ಮರಣಾರ್ಥ ನಿರ್ಮಿಸಿರುವ" ಬಾವಿಯನ್ನು ರೋವರ್ಸ್-ರೇಂಜರ್ಸ್‌ಗಳು ಸ್ವಚ್ಛಗೊಳಿಸಿರುವುದು.

ಜಾಂಬೋರೇಟ್‌ನ ಸಂದರ್ಭದಲ್ಲಿ ಸ್ಕೌಟ್ಸ್-ಗೈಡ್ಸ್ / ರೋವರ್ಸ್-ರೇಂಜರ್ಸ್‌ಗಳು ತರಬೇತಿ ಕೇಂದ್ರದಲ್ಲಿ ಸಮುದಾಯ ಸೇವಾ ಶಿಬಿರದಲ್ಲಿ ತೊಡಗಿರುವುದು.

ಜನವರಿ 3 ರಿಂದ 07, 2020ರ ವರೆಗೆ ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ 42ನೇ ಕಬ್-ಬುಲ್‌ಬುಲ್ ಉತ್ಸವವನ್ನು ಶ್ರೀಮತಿ ಯಶೋಧರ ಎಸ್. ಘೋರ್ಪಡೆ, ಸಂಡೂರಿನ ಮಹಾರಾಣಿಯವರು ಮತ್ತು ನಿರ್ದೇಶಕರು ಸ್ಮೈರ್ ಎಜ್ಯುಕೇಷನ್ ಸೊಸೈಟಿ, ವ್ಯಾಸನಕೆರೆ, ಹೊಸಪೇಟೆ ಅವರು ಉದ್ಘಾಟಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಶ್ರೀಮತಿ ಪಿ. ಸರೋಜ, ಶ್ರೀ ಆರ್. ಚಂದ್ರಶೇಖರನ್, ಶ್ರೀ ಬಿ.ಆರ್. ರಾಮಚಂದ್ರರಾವ್ ಕಾಳೆ, ಶ್ರೀ ಎ.ಎಸ್. ಮಧುಸೂದನ್ ಶ್ರೀ ಎಲ್.ಟಿ. ಲೋಕೇಶ್, ಶ್ರೀಮತಿ ಜಯಶ್ರೀ ಜೋಷಿ, ಶ್ರೀಮತಿ ಸಂಧ್ಯಾರಾಣಿ ಹಾಗೂ ಕಬ್ಸ್-ಬುಲ್ಸ್‌ಗಳು ಚಿತ್ರದಲ್ಲಿದ್ದಾರೆ.

ಕಬ್ಸ್‌ಬುಲ್‌ಬುಲ್ಸ್‌ಗಳ ಉತ್ಸವದಲ್ಲಿ ಭಾಗವಹಿಸಿದ ಚಿಣ್ಣರುಗಳಿಂದ ಸಾಂಸ್ಕೃತಿಕ ಪ್ರದರ್ಶನ.

3 ಜನವರಿ 2020ರಂದು ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ ರೇಂಜರಿಂಗ್ ಶತಮಾನೋತ್ಸವದ ಉದ್ಘಾಟನಾ ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ಜಾಂಬೋರೇಟ್ ಚೀಫ್ ಶ್ರೀ ಆರ್. ಚಂದ್ರಶೇಖರನ್ ಹೃದಯರೋಗತಜ್ಞರು ಮತ್ತು ಸಮಾಜಸೇವಕರಾದ ಡಾ. ವಿಜಯಲಕ್ಷ್ಮೀ ಬಾಳೆಕುಂದ್ರಿ, ಏಷಿಯನ್ ಸೆಂಟರ್ ಫಾರ್ ಎಂಟರ್‌ಪ್ರೈಸಸ್ ಇನ್ಸಿಯೇಟೀವ್ ಸಂಸ್ಥಾಪಕರಾದ ಶ್ರೀಮತಿ ಮದುರಛತ್ರಪತಿ ಮತ್ತು ಡಾ. ರೀಟಾ ಹಂಡ್ರಾ, ಸ್ಟ್ರೆಸ್ ಮ್ಯಾನ್‌ಮೆಂಟ್ ಎಕ್ಸಪರ್ಟ್ ಅವರುಗಳು ಉಪಸ್ಥಿತರಿದ್ದಾರೆ.

ರೇಂಜರಿಂಗ್ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರುವ ರೇಂಜರ್ಸ್‌ಗಳು

4 ಜನವರಿ 2020ರಂದು ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ ರೇಂಜರಿಂಗ್ ಶತಮಾನೋತ್ಸವದ ಸಮಾರಂಭದಲ್ಲಿ ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀಮತಿ ಮುಕ್ತಾ ಬಿ. ಕಾಗಲಿ ಶ್ರೀಮತಿ ಗಾಯಿತ್ರಿ ರೆಡ್ಡಿ, ಶ್ರೀಮತಿ ಕಮಲಾಕ್ಷಿ ಹೆಗ್ಡೆ, ಶ್ರೀಮತಿ ಜ್ಯೋತಿ ಮತ್ತು ಶ್ರೀಮತಿ ರಾಧಾವೆಂಕಟೇಶ್ ಉಪಸ್ಥಿತರಿದ್ದಾರೆ.

ವ್ಯಕ್ತಿತ್ವ ವಿಕಸನದ ಬಗ್ಗೆ ಶ್ರೀಮತಿ ಮುಕ್ತಾ ಬಿ. ಕಾಗಲಿ ಅವರು ರೇಂಜರ್ಸ್‌ಗಳನ್ನ ಉದ್ದೇಶಿಸಿ ಮಾತನಾಡುತ್ತಿರುವುದು.

28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್‌ನಲ್ಲಿ ಏರ್ಪಡಿಸಿದ ವಿವಿಧ ಸಾಹಸಮಯ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳ ವಿಹಂಗಮ ನೋಟ







28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ ಜಾಂಬೋರೇಟನ್‌ನಲ್ಲಿ ಏರ್ಪಡಿಸಿದ ವಿವಿಧ ಸಾಹಸಮಯ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳ ವಿಹಂಗಮ ನೋಟ







28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್‌ನಲ್ಲಿ ಏರ್ಪಡಿಸಿದ ವಿವಿಧ ಸಾಹಸಮಯ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳ ವಿಹಂಗಮ ನೋಟ







28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್‌ನಲ್ಲಿ ಏರ್ಪಡಿಸಿದ ವಿವಿಧ ಸಾಹಸಮಯ ಚಟುವಟಿಕೆಗಳಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಮತ್ತು ರೋವರ್ಸ್-ರೇಂಜರ್ಸ್‌ಗಳ ವಿಹಂಗಮ ನೋಟ







ಜಾಂಬೋರೇಟ್‌ನ ಸಂದರ್ಭದಲ್ಲಿ ಆಯೋಜಿಸಿದ್ದ ಯೋಗ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು.

ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿದ್ದ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ಸ್ಕೌಟರ್ಸ್-ಗೈಡರ್ಸ್‌ಗಳ ವಿಹಂಗಮ ನೋಟ




ಶ್ರೀ ಎಸ್.ಆರ್. ಉಮಾಶಂಕರ್, ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ ಇವರು "ರಾಷ್ಟ್ರೀಯ ಶಿಕ್ಷಣ ನೀತಿ 2019"ರ ವಿಚಾರ ಗೋಷ್ಠಿಯನ್ನು ಸಸಿಗೆ ನೀರೆರೆಯುವ ಮೂಲಕ ಉದ್ಘಾಟಿಸಿದರು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಶ್ರೀ ಯು.ಟಿ. ಖಾದರ್, ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಇಲಾಖೆ ಮಾಜಿ ಸಚಿವರು ಮತ್ತು ಶಾಸಕರು, ಚಿತ್ರದುರ್ಗದ ಛಲವಾದಿ ಮಠದ ಪೂಜ್ಯ ಸ್ವಾಮೀಜಿಯವರು, ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರಿ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿ ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಬಿ.ಕೆ. ಬಸವರಾಜ ಮತ್ತು ಶ್ರೀಮತಿ ಬಿ.ವಿ. ರಾಮಲತಾ ಹಾಗೂ ಇತರರು ಉಪಸ್ಥಿತರಿದ್ದರು.



31 ಡಿಸೆಂಬರ್ 2019ರಂದು ಹೊಸವರ್ಷ ಆಚರಣಾ ಸಮಾರಂಭದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಯು.ಟಿ. ಖಾದರ್ ಮಾನ್ಯ ನಗರಾಭಿವೃದ್ಧಿ ಮತ್ತು ವಸತಿ ಇಲಾಖೆ ಮಾಜಿ ಸಚಿವರು ಮತ್ತು ಶಾಸಕರು, ಶ್ರೀ ಕೆ. ಗಂಗಪ್ಪಗೌಡ, ರಾಜ್ಯ ಕಾರ್ಯದರ್ಶಿ ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀಮತಿ ಕೆ.ವಿ. ಶಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್), ಶ್ರೀಮತಿ ಮಲ್ಲೇಶ್ವರಿ ಜುಜಾರೆ ಎಎಸ್‌ಒಸಿ(ಗೈಡ್ಸ್) ಹಾಗೂ ಇತರರು ಉಪಸ್ಥಿತರಿದ್ದರು.

ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಸ್ಕೌಟರ್ಸ್-ಗೈಡರ್ಸ್‌ಗಳ ವಿಹಂಗಮ ನೋಟ







# ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರದ
# ಡಾ॥ ಆನಿಬೆಸೆಂಟ್ ರಾಜ್ಯ ತರಬೇತಿ ಶಿಬಿರ ಕೇಂದ್ರದಲ್ಲಿ
# 27 ಡಿಸೆಂಬರ್ 2019 ರಿಂದ 2 ಜನವರಿ 2020ರ ವರೆಗೆ ಜರುಗಿದ
# 28ನೇ ಕರ್ನಾಟಕ ರಾಜ್ಯ ಸ್ಕೌಟ್ಸ್-ಗೈಡ್ಸ್ ಜಾಂಬೋರೇಟ್

## ಜಾಂಬೂರೇಟ್ ಉದ್ಘಾಟನಾ ಸಮಾರಂಭ

26 ಡಿಸೆಂಬರ್ 2019ರಂದು ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಸುಮಾರು 5,000 ಕ್ಕೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗೂ 1000 ಶಿಕ್ಷಕ/ಶಿಕ್ಷಕಿ ವರ್ಗದವರು ಹಾಗೂ ಆಂಧ್ರ ಮತ್ತು ತೆಲಂಗಾಣ ರಾಜ್ಯಗಳ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಉದ್ಘಾಟನಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

27 ಡಿಸೆಂಬರ್ 2019ರ ಸಂಜೆ ಜಾಂಬೋರೇಟ್ ಉದ್ಘಾಟನಾ ಕಾರ್ಯಕ್ರಮಕ್ಕೆ ಆಗಮಿಸಿದ ರಾಜ್ಯದ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ.ಬಿ.ಎಸ್.ಯಡಿಯೂರಪ್ಪ ಅವರಿಗೆ ಪೊಲೀಸ್ ಮತ್ತು ಸೇನಾ ಇಲಾಖೆಗಳ ವಾದ್ಯಗೋಷ್ಠಿ ಮೂಲಕ ಗೌರವವಂದನೆ ಸಲ್ಲಿಸಲಾಯಿತು. ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರಾದ ಸನ್ಮಾನ್ಯ ಶ್ರೀ ಎಸ್. ಸುರೇಶ್ ಕುಮಾರ್, ಕನ್ನಡ ಮತ್ತು ಸಂಸ್ಕೃತಿ ಹಾಗೂ ಪ್ರವಾಸೋದ್ಯಮ ಸಚಿವರಾದ ಸನ್ಮಾನ್ಯ ಶ್ರೀ ಸಿ.ಟಿ. ರವಿ, ರಾಷ್ಟ್ರೀಯ ಸಂಸ್ಥೆ ಅಧ್ಯಕ್ಷರೂ ಹಾಗೂ ಮಾನ್ಯ ರಾಜ್ಯಸಭಾ ಸದಸ್ಯರಾದ ಡಾ॥ ಅನಿಲ್‌ಕುಮಾರ್ ಜೈನ್, ಮಾನ್ಯ ಲೋಕಸಭಾ ಸದಸ್ಯರಾದ ಶ್ರೀ ಪಿ.ಸಿ. ಮೋಹನ್, ಮಾನ್ಯ ಶಾಸಕರುಗಳಾದ ಶ್ರೀ ಎಸ್.ಆರ್. ವಿಶ್ವನಾಥ್, ಶ್ರೀ ಟಿ. ವೆಂಕಟರಮಣಯ್ಯ, ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಾದ ಶ್ರೀ ಪುಟ್ಟಣ್ಣ, ಶ್ರೀ ಅ. ದೇವೇಗೌಡ ಹಾಗೂ ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳು, ಜಿಲ್ಲಾ ಪರಿಷತ್ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ದೊಡ್ಡಬಳ್ಳಾಪುರ ಪುರಸಭೆ ಹಾಗೂ ವಿವಿಧ ಇಲಾಖೆಗಳ ಮುಖ್ಯಸ್ಥರುಗಳು ಮತ್ತು ಅಧಿಕಾರಿಗಳು ಮತ್ತು ಸ್ಕೌಟ್ಸ್-ಗೈಡ್ಸ್ ಚಳವಳಿಯ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಆಹ್ವಾನಿತರು ವಿವಿಧ ಮಾಧ್ಯಮದವರು ಹಾಗೂ ಗಣ್ಯರುಗಳು ಸಮಾರಂಭದಲ್ಲಿ ಭಾಗವಹಿಸಿದ್ದರು.

ಮಾನ್ಯ ಮುಖ್ಯಮಂತ್ರಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತರು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಹಾಗೂ ರಾಷ್ಟ್ರೀಯ ಸಂಸ್ಥೆ ಅಧ್ಯಕ್ಷರು ತೆರೆದ ಜೀಪಿನಲ್ಲಿ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಂದ ಗೌರವ ವಂದನೆ ಸ್ವೀಕರಿಸಿದರು. ನಾಡಗೀತೆ ಮತ್ತು ಸ್ಕೌಟ್ಸ್ / ಗೈಡ್ಸ್ ಪ್ರಾರ್ಥನೆಯೊಂದಿಗೆ ಆರಂಭಗೊಂಡ ಈ ಸಮಾರಂಭವನ್ನು ಸನ್ಮಾನ್ಯ ಮುಖ್ಯಮಂತ್ರಿಗಳು ಉದ್ಘಾಟಿಸಿದರು.

ಕಾರ್ಯಕ್ರಮಕ್ಕೆ ಆಗಮಿಸಿದ ಗಣ್ಯರನ್ನು ಸ್ವಾಗತಿಸಿದ ರಾಜ್ಯ ಮುಖ್ಯ ಆಯುಕ್ತರು ತಮ್ಮ ಸ್ವಾಗತ ಭಾಷಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿ ರಾಜ್ಯದ ತರಬೇತಿ ಕೇಂದ್ರಗಳಿಗೆ ಅನುದಾನವನ್ನು ನೀಡಲು ರಾಜ್ಯ ಸರ್ಕಾರಕ್ಕೆ ಮನವಿ ಮಾಡಿದರು. ಅಲ್ಲದೆ, ಈ ಕಾರ್ಯಕ್ರಮಕ್ಕೆ ಭಾರತದ ಉಪರಾಷ್ಟ್ರಪತಿಗಳಾದ

ಶ್ರೀ ವೆಂಕಯ್ಯನಾಯ್ಡುರವರು, ಸುತ್ತೂರು ಜಗದ್ಗುರುಗಳಾದ ಶ್ರೀ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮೀಜಿ ಅವರು ಭಾರತರತ್ನ ಪುರಸ್ಕೃತರಾದ ವಿಜ್ಞಾನಿ ಶ್ರೀ ಸಿ.ಎನ್.ಆರ್. ರಾವ್ ಅವರು ಹಾಗೂ ಇಸ್ರೋದ ಮಾಜಿ ಅಧ್ಯಕ್ಷರಾದ ಡಾ॥ ಕೆ. ಕಸ್ತೂರಿರಂಗನ್ ಅವರು ಇತರ ಮಠಾಧೀಶರು ಹಾಗು ಗಣ್ಯರುಗಳು ಶುಭಹಾರೈಸಿ ಕಳಿಸಿದ್ದ ಪತ್ರಗಳನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಂಡರು. 28ನೇ ಜಾಂಬೂರೇಟ್‌ನ ಪ್ರಥಮದಿನದ ಅಂಚೆ ಲಕೋಟೆಯನ್ನು ಸನ್ಮಾನ್ಯ ಮುಖ್ಯಮಂತ್ರಿಗಳು ಬಿಡುಗಡೆ ಮಾಡಿದರು. ಕರ್ನಾಟಕದ ಅಂಚೆ ಇಲಾಖೆಯ ಪೋಸ್ಟ್ ಮಾಸ್ಟರ್ ಜನರಲ್ ಶ್ರೀ ಡಿ.ಎಸ್.ವಿ.ಆರ್. ಮೂರ್ತಿರವರು ಸಮಾರಂಭದಲ್ಲಿ ಭಾಗವಹಿಸಿದರು.

ರಾಜ್ಯಸಭಾ ಸದಸ್ಯರೂ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಅಧ್ಯಕ್ಷರಾದ ಡಾ॥ ಅನಿಲ್ ಕುಮಾರ್ ಜೈನ್ ರವರು ತಮ್ಮ ಭಾಷಣದಲ್ಲಿ ರಾಜ್ಯ ಮುಖ್ಯ ಆಯುಕ್ತರ ಕೋರಿಕೆ ಮೇರೆಗೆ ಅಂತರಾಷ್ಟ್ರೀಯ ಮಟ್ಟದ ಜಾಂಬೂರಿಯನ್ನು ಆಯೋಜಿಸಲು ಒಪ್ಪಿ ಅದಕ್ಕಾಗಿ ತಾವು ಪ್ರಯತ್ನಿಸುವುದಾಗಿ ಭರವಸೆ ನೀಡಿದರು ಹಾಗೂ ಗೌರವಾನ್ವಿತ ಪ್ರಧಾನಮಂತ್ರಿಗಳಾದ ಶ್ರೀ ನರೇಂದ್ರ ಮೋದಿಜಿ ಅವರನ್ನು ಉದ್ಘಾಟಿಸಲು ಆಹ್ವಾನಿಸುವುದಾಗಿ ಮತ್ತು ವಿಶ್ವಜಾಂಬೂರಿಯನ್ನು ಬೆಂಗಳೂರಿನಲ್ಲಿ ಏರ್ಪಡಿಸಬೇಕೆಂದು ಕೋರುವುದಾಗಿ ತಿಳಿಸಿದರು.

ಮಾನ್ಯ ಮುಖ್ಯಮಂತ್ರಿಗಳು ತಮ್ಮ ಭಾಷಣದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯನ್ನು ರಾಜ್ಯದೆಲ್ಲೆಡೆ ಹೆಚ್ಚಿಸಲು ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಹಗಲಿರುಳು ಶ್ರಮಿಸುತ್ತಿದ್ದು, ಮೊದಲ ಹಂತದಲ್ಲಿ ಸಂಸ್ಥೆಯ ತರಬೇತಿ ಕೇಂದ್ರಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ರೂ. 10 ಕೋಟಿಗಳನ್ನು ಅನುದಾನದ ರೂಪದಲ್ಲಿ ಬಿಡುಗಡೆ ಮಾಡುವುದಾಗಿ ಘೋಷಿಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಸಹಾಯಕವಾಗಿದೆ. ಮಕ್ಕಳಲ್ಲಿ ಸೇವಾ ಮನೋಭಾವನೆ, ಪರಸ್ಪರ ಸಹಕಾರ ಸೌಹಾರ್ದತೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು, ಅವರಲ್ಲಿ ನಾಯಕತ್ವದಗುಣ ಹಾಗೂ ವ್ಯಕ್ತಿತ್ವವಿಕಸನ ಮಾಡುವಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯು ಬಹಳ ಮಹತ್ವದ ಕಾರ್ಯವನ್ನು ನಿರ್ವಹಿಸುತ್ತದೆ ಎಂದು ಹೇಳಿ

ಚಳವಳಿಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ಅವರನ್ನು ಸ್ಮರಿಸಿಕೊಂಡರು.

28 ಡಿಸೆಂಬರ್ 2019 ಶನಿವಾರ ಬೆಳಗ್ಗೆ 9 ಗಂಟೆಗೆ ವಿವಿಧ ಚಟುವಟಿಕೆಗಳ ಕಾರ್ಯಕ್ರಮಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಪಿ.ಎನ್. ರವೀಂದ್ರರವರು ಉದ್ಘಾಟನೆ ಮಾಡಿದರು. ನಂತರ ಮಾತನಾಡಿದ ಅವರು ಪ್ರಶಸ್ತಿಗಾಗಿ ಇಲ್ಲಿ ಯಾರೂ ಕೆಲಸ ಮಾಡುವುದಿಲ್ಲ, ಇಲ್ಲಿ ಎಲ್ಲರೂ ನಿಸ್ವಾರ್ಥದಿಂದ ಸೇವೆ ಮಾಡುವವರೇ ಹೆಚ್ಚು, ಆದ್ದರಿಂದ ಇಲ್ಲಿ ಒಳ್ಳೆಯ ವಾತಾವರಣವಿದ್ದು ಅದು ಮಕ್ಕಳನ್ನು ದೇಶದ ಸತ್ಪ್ರಜೆಗಳನ್ನಾಗಿ ಮಾಡುತ್ತದೆ ಎಂದು ಹೇಳಿದರು.

### ಚಾರಣ

ಚಾರಣ ಕಾರ್ಯಕ್ರಮದಲ್ಲಿ ವಿವಿಧ ಜಿಲ್ಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ತುಂಬಾ ಉತ್ಸಾಹದಿಂದ ಪಾಲ್ಗೊಂಡಿದ್ದರು. ಮಾಕಾಳಮ್ಮ ಬೆಟ್ಟವನ್ನು ತಲುಪಿದ ಸ್ಕೌಟ್ ಹಾಗೂ ಗೈಡ್ ಮಕ್ಕಳು ಅರಣ್ಯ ಇಲಾಖೆಯ ಸಿಬ್ಬಂದಿಯೊಂದಿಗೆ ಕಾಡಿನಲ್ಲಿ ಪ್ರವೇಶ ಮಾಡಿ ಅರಣ್ಯ ಸಿಬ್ಬಂದಿಯ ಮಾರ್ಗದರ್ಶನದಲ್ಲಿ ಕಾಡಿನಲ್ಲಿರುವ ಪ್ರಾಣಿಗಳು ಹಾಗೂ ಔಷಧೀಯ ಸಸ್ಯಗಳ ಕುರಿತ ವಿವರಗಳನ್ನು ತಿಳಿದುಕೊಂಡರು.

### ಬೀಜದ ಉಂಡೆ ತಯಾರಿಕೆ

ಜಾಂಬೋರೇಟ್‌ನಲ್ಲಿ ನಡೆದ ಸಮುದಾಯ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಮಾನ್ಯ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಂಸ್ಥೆಯ ಜಿಲ್ಲಾ ಕಾರ್ಯದರ್ಶಿ ಶ್ರೀ ಡಿ. ಶ್ರೀನಿವಾಸ ಪ್ರಸಾದ್, ಅರಣ್ಯ ಅಧಿಕಾರಿಗಳಾದ ಶ್ರೀ ಹನುಮಂತರಾಯಪ್ಪ ಹಾಗೂ ಸ್ಕೌಟ್ ಮಾಸ್ಟರ್ಸ್/ ಗೈಡ್ಸ್ ಕ್ಯಾಪ್ಟನ್‌ಗಳು ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ ಸುಮಾರು ನೂರು ಮಕ್ಕಳು ಭಾಗವಹಿಸಿದ್ದರು. ಹಸಿರು ಬೀಜದ ಉಂಡೆ ತಯಾರಿಕೆಯಲ್ಲಿ ಸ್ಕೌಟ್-ಗೈಡ್ ಮಕ್ಕಳೊಂದಿಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು, ಅರಣ್ಯ ಅಧಿಕಾರಿಗಳಾದ ಶ್ರೀ ಹನುಮಂತಪ್ಪ ಭಾಗವಹಿಸಿ ಅಭಿನಂದಿಸಿದರು.

ಬೀಜಗಳನ್ನು ಮಣ್ಣಿನ ಉಂಡೆಗಳಲ್ಲಿ ಇಟ್ಟು ದೂರದ ಬಯಲು ಪ್ರದೇಶದಲ್ಲಿ ಹಾಕಿದಾಗ ಅವುಗಳು ಮೊಳಕೆಯೊಡೆದು, ಸಸಿಗಳಾಗಿ ಬೆಳೆದು ಗಿಡಗಳಾಗುತ್ತವೆ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪ್ರತಿನಿತ್ಯ ಅಂತಹ 20 ಸಾವಿರಕ್ಕೂ ಹೆಚ್ಚು ಬೀಜದುಂಡೆಗಳನ್ನು ತಯಾರಿಸಿ ಈ ಜಾಂಬೂರೇಟ್‌ನಲ್ಲಿ 50 ಸಾವಿರಕ್ಕೂ ಹೆಚ್ಚು ಬೀಜದುಂಡೆಗಳನ್ನು ತಯಾರು ಮಾಡಿರುತ್ತಾರೆಂದು ತಿಳಿಸಲಾಯಿತು.

### ಸಾಹಸಮಯ ಚಟುವಟಿಕೆಗಳು

ಸಾಹಸಮಯ ಚಟುವಟಿಕೆ ವಿಭಾಗವನ್ನು ಉದ್ಘಾಟಿಸಿದ ಮಾನ್ಯ ಜಿಲ್ಲಾಧಿಕಾರಿಗಳಾದ ಶ್ರೀ ಪಿ.ಎನ್. ರವೀಂದ್ರ ಮತ್ತು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್ ಸಿಂಧ್ಯಾ ಮತ್ತು ಶ್ರೀ ಶಿವರಾಜ್, ತಹಸಿಲ್ದಾರರು ದೊಡ್ಡಬಳ್ಳಾಪುರ ಭಾಗವಹಿಸಿದರು. ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಆಯುಕ್ತರು ಉದ್ಘಾಟಿಸಿ, ಸಾಹಸಮಯ ಚಟುವಟಿಕೆಗಳನ್ನು ವೀಕ್ಷಿಸಿ ಕೆಲವೊಂದರಲ್ಲಿ ತಾವೂ ಭಾಗವಹಿಸಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ಫೂರ್ತಿ ನೀಡಿದರು.

### ಮಹಾತ್ಮ ಗಾಂಧೀಜಿಯವರ 150ನೇ ಜನ್ಮದಿನದ ಸ್ಮರಣೆ

ಮಹಾತ್ಮ ಗಾಂಧೀಜಿಯವರ 150ನೇ ಜನ್ಮದಿನದ ಸ್ಮರಣಾರ್ಥ ಅವರ ಜೀವನದ ಮುಖ್ಯ ಘಟನಾವಳಿಗಳನ್ನು ಕೇಂದ್ರ ಸರ್ಕಾರದ ಡಿ.ಪಿ.ಎ.ಪಿ ಇಲಾಖೆ ಏರ್ಪಡಿಸಿದ್ದ ಪ್ರದರ್ಶನದ ಮೂಲಕ ಜಾಂಬೋರೇಟ್‌ನಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳಿಗೆ ರೋವರ್ಸ್-ರೇಂಜರ್ಸ್‌ಗಳಿಗೆ ದಳನಾಯಕ-ನಾಯಕಿಯರುಗಳಿಗೆ ವಿವರಗಳನ್ನು ತಿಳಿಸಿಕೊಡಲಾಯಿತು.

### ಗ್ಲೋಬಲ್ ಡೆವಲಪ್‌ಮೆಂಟ್ ವಿಲೇಜ್ ಮತ್ತು ವಸ್ತು ಪ್ರದರ್ಶನ

ಶ್ರೀ ಎಂ.ವಿ. ಜನಾರ್ಧನ್, ಜಿಲ್ಲಾ ಕಾರ್ಯದರ್ಶಿ ಕೋಲಾರ ಇವರ ನೇತೃತ್ವದಲ್ಲಿ ರೂಪುಗೊಂಡ "ಗ್ಲೋಬಲ್ ಡೆವಲಪ್ಮೆಂಟ್ ವಿಲೇಜ್ ಮತ್ತು ವಸ್ತು ಪ್ರದರ್ಶನ" ಕಾರ್ಯಕ್ರಮವನ್ನು ಬೆಂಗಳೂರು ಆಕಾಶವಾಣಿಯ ನಿರ್ದೇಶಕರಾದ ಶ್ರೀಮತಿ ನಿರ್ಮಲ ಎಲಿಗಾರ್‌ರವರು ಉದ್ಘಾಟಿಸಿದರು. ಈ ವಸ್ತುಪ್ರದರ್ಶನದಲ್ಲಿ ವಿವಿಧ ರೀತಿಯ ಕರಕುಶಲ ವಸ್ತುಗಳನ್ನು ಪ್ರದರ್ಶನಕ್ಕೆ ಇಡಲಾಗಿತ್ತು. ನಿರುಪಯುಕ್ತ ವಸ್ತುಗಳನ್ನು, ದಿನಬಳಕೆ ವಸ್ತುಗಳನ್ನಾಗಿ ಪರಿವರ್ತಿಸುವ ಕೌಶಲ್ಯ, ಕೃಷಿವಿಜ್ಞಾನ, ಆರೋಗ್ಯ, ವಿಜ್ಞಾನ ಇನ್ನೂ ಹತ್ತು ಹಲವಾರು ಪ್ರಯೋಜನಕಾರಿ ಮಾಹಿತಿಯನ್ನು ವಸ್ತು ಪ್ರದರ್ಶನವು ಒಳಗೊಂಡಿತ್ತು. ಜಾಂಬೋರೇಟ್‌ನಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್ಸ್ ರೇಂಜರ್ಸ್ ಹಾಗು ಸಾರ್ವಜನಿಕರು ಈ ಪ್ರದರ್ಶನವನ್ನು ವೀಕ್ಷಿಸಿದರು.

### ಜಿಪ್ ಲೈನ್ / ZIP LINE

28ನೇ ಕರ್ನಾಟಕ ರಾಜ್ಯ ಜಾಂಬೋರೇಟ್‌ನ ಸಾಹಸಮಯ ಚಟುವಟಿಕೆಗಳಲ್ಲಿ ಅತ್ಯಂತ ಆಕರ್ಷಣೆಯ ಚಟುವಟಿಕೆ ಎಂದರೆ "ಜಿಪ್ ಲೈನ್" ಕಾರ್ಯಕ್ರಮ ರಾಜ್ಯ ಸಂಸ್ಥೆಯ ಆಹ್ವಾನದ ಮೇಲೆ ಮಹಾರಾಷ್ಟದಿಂದ ಆಗಮಿಸಿದ ನುರಿತ ತಜ್ಞರೊಂದಿಗೆ ಈ "ಜಿಪ್‌ಲೈನ್" ಏರ್ಪಡಿಸಲಾಗಿತ್ತು. ಸುಮಾರು 50 ಅಡಿ ಎತ್ತರದಿಂದ, 25 ಅಡಿಗೆ ಜಾರುವಂತೆ, 450 ಅಡಿ ಆಳದ ಉಕ್ಕಿನ ತಂತಿಗಳನ್ನು ಅಳವಡಿಸಲಾಗಿತ್ತು. ಶಿಬಿರದ 3, 4, 5 ಮತ್ತು 6ನೇ ದಿನಗಳಂದು ಕರ್ನಾಟಕ ರಾಜ್ಯದಿಂದ ಹಾಗೂ ನೆರೆರಾಜ್ಯಗಳಿಂದ ಆಗಮಿಸಿದ ವಿವಿಧ ಜಿಲ್ಲೆಗಳ ಸ್ಕೌಟ್ಸ್,ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳಿಗೆ ಸಂಖ್ಯಾನುಗುಣವಾಗಿ ಆಯ್ದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಮಾತ್ರ ಈ ಚಟುವಟಿಕೆಗೆ ಅವಕಾಶ ನೀಡಲಾಯಿತು.

### ಸಾಹಸಮಯ ಚಟುವಟಿಕೆಗಳು

ರಾಜ್ಯ ಜಾಂಬುರೇಟ್‌ನಲ್ಲಿ ವಿವಿಧ ರೀತಿಯ ಸಾಹಸ ಚಟುವಟಿಕೆಗಳು ಮತ್ತು ಮನೋರಂಜನೆಯ ಸ್ಪರ್ಧೆಗಳನ್ನು

ಹಮ್ಮಿಕೊಳ್ಳಲಾಗಿತ್ತು. ಒಟ್ಟು 30 ಸಾಹಸಮಯ ಚಟುವಟಿಕೆಗಳನ್ನು ಏರ್ಪಡಿಸಲಾಗಿತ್ತು. ಇದರಲ್ಲಿ ವಾಲ್‌ಕ್ಲೈಂಬಿಂಗ್, ಮಂಕಿಬ್ರಿಡ್ಜ್, ಈಜುಕೊಳ ಹಾಗೂ ಕೆಲವೊಂದು ಚಟುವಟಿಕೆಗಳು ಬಹಳ ಕಷ್ಟವಾಗಿದ್ದರೂ ಅವುಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಪಾಲ್ಗೊಂಡರು. ವಿಶೇಷವಾಗಿ "ಗನ್ ಶೂಟಿಂಗ್" ಮಕ್ಕಳಿಗೆ ಬಹಳ ಉತ್ಸುಕತೆವುಂಟು ಮಾಡಿತು.

### ಪ್ರಥಮ ಚಿಕಿತ್ಸೆ ತರಬೇತಿ

ಪ್ರಥಮಚಿಕಿತ್ಸೆ ಮತ್ತು ಹೃದಯರಕ್ತನಾಳ ಪುನರುಜ್ಜೀವನ ಕಾರ್ಯಕ್ರಮದ ಉದ್ಘಾಟನೆಯನ್ನು ಮಾಜಿ ಆರೋಗ್ಯ ಸಚಿವರು ಹಾಗೂ ಶಾಸಕರಾದ ಶ್ರೀ ಯು.ಟಿ. ಖಾದರ್‌ರವರು ನೆರವೇರಿಸಿದರು.

ಡಾ|| ಶ್ರೀನಾಥ್ ಅವರು ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪ್ರಥಮಚಿಕಿತ್ಸೆ ಮತ್ತು ಹೃದಯರಕ್ತನಾಳ ಪುನರುಜ್ಜೀವನ ವಿಷಯದ ಕುರಿತು ಮಾಹಿತಿಯನ್ನು ನೀಡಿದರು. ಕೆಲವೊಂದು ಪ್ರಥಮ ಚಿಕಿತ್ಸೆಗಳನ್ನು ಮಕ್ಕಳಿಗೆ ಪ್ರಾಯೋಗಿಕವಾಗಿ ತಿಳಿಸಿಕೊಡಲಾಯಿತು.

### ಯುವ ವೇದಿಕೆ ಕಾರ್ಯಕ್ರಮ

ಯುವ ವೇದಿಕೆ ಕಾರ್ಯಕ್ರಮದ ಉದ್ಘಾಟನೆಯನ್ನು ವಕೀಲರು ಮತ್ತು ಯುವ ನಾಯಕರಾದ ಶ್ರೀ ನಿಖಿಲ್‌ಕುಮಾರ್ ಕೊಂಡಜ್ಜಿ ನೆರವೇರಿಸಿದರು. ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಶ್ರೀ ನಿಖಿಲ್‌ಕುಮಾರ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿ ವಿದ್ಯಾರ್ಥಿಗಳಲ್ಲಿ ಶಿಸ್ತು ಹಾಗೂ ಸಮಾನತೆಯನ್ನು ಬೆಳೆಸಿ ಉತ್ತಮ ನಾಗರಿಕರನ್ನಾಗಿ ಮತ್ತು ಸತ್ಪ್ರಜೆಗಳನ್ನಾಗಿ ಮಾಡುವಲ್ಲಿ ಮುಖ್ಯಪಾತ್ರವಹಿಸುತ್ತದೆ ಎಂದರು. ತಾವು ಕೂಡ ಸ್ಕೌಟ್ ಆಗಿದ್ದು ರಾಜ್ಯ ಪುರಸ್ಕಾರ ಪ್ರಶಸ್ತಿಯನ್ನು ಪಡೆದಿರುವುದನ್ನು ಸ್ಮರಿಸಿಕೊಂಡರು.

ಜಾಂಬೋರೇಟ್‌ನ ನಿರ್ದೇಶಕ ಶ್ರೀ ವಿ.ಎಸ್. ಮಧುಸೂದನ್ ಮಾತನಾಡಿ ಯುವಕರನ್ನು ಉತ್ತಮ ನಾಯಕರನ್ನಾಗಿ ಹೇಗೆ ತಯಾರು ಮಾಡಬೇಕೆಂಬುದರ ಬಗ್ಗೆ ವಿವರಿಸಿದರು, ವಿದೇಶಗಳಲ್ಲಿ ಉತ್ತಮ ನಾಯಕರಾಗಲು 30 ರಿಂದ 35 ವರ್ಷ ವಯಸ್ಸು ಗರಿಷ್ಟವಾಗಿರುತ್ತದೆ. ಏಷ್ಯಾ ಖಂಡದ ರಾಷ್ಟ್ರಗಳಲ್ಲಿ ಸುಮಾರು 40 ರಿಂದ 60 ವರ್ಷ ವಯೋಮಿತಿ ಇರಬೇಕೆಂದು ತಿಳಿಸಿದರು.

### ನೀರು ಮತ್ತು ಸ್ವಚ್ಛತಾ ವಿಭಾಗ

ಬೆಂಗಳೂರು ದಕ್ಷಿಣ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಕೆ. ಖಾನ್ ಅವರು ನೀರು ಮತ್ತು ಸ್ವಚ್ಛತಾ ಇಲಾಖೆಯ ಮುಖ್ಯಸ್ಥರಾಗಿದ್ದು, ಈ ಎರಡು ಇಲಾಖೆಗಳ ಸಂಪೂರ್ಣ ಜವಾಬ್ದಾರಿಗಳ ಮೇಲ್ವಿಚಾರಕರಾಗಿ ಅವರನ್ನು ಸಂದರ್ಶಿಸಿದಾಗ ತಮ್ಮ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ. ಅವರ ನೇತೃತ್ವದಲ್ಲಿ ರೋವರ್ಸ್ ಮತ್ತು ರೇಂಜರ್ಸ್ ತಮ್ಮ ಸೇವೆಯನ್ನು ತುಂಬಾ ನಿಷ್ಠೆ ಮತ್ತು ಸಂತೋಷದಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ ಎಂದು ತಿಳಿಸಿದರು, ಹೀರುವ ಯಂತ್ರದಿಂದ ಬಹಳಷ್ಟು ಉಪಯೋಗವಾಗಿದೆ ಎಂದು ತಿಳಿಸಿದರು ಹಾಗೂ ಬೆಂಗಳೂರಿನ ಬಿ.ಡಬ್ಲ್ಯೂ.ಎಸ್.ಎಸ್.ಬಿ. ಅವರು ಪೂರೈಸುತ್ತಿರುವ ಕುಡಿಯುವ ನೀರು ಶೇಖರಣೆ ಮಾಡಿ ಇಟ್ಟಿದ್ದು, ಶಿಬಿರದ ಬಳಕೆಗೆ ಸಾಕಾಗುವಷ್ಟು ನೀರನ್ನು ಪ್ರತಿನಿತ್ಯ ತಲುಪಿಸುತ್ತಿದ್ದುದನ್ನು ವಿವರಿಸಿದರು. ನೀರನ್ನು ಒದಗಿಸುವಲ್ಲಿ ಇವರ ಪಾತ್ರ ಬಹಳ ದೊಡ್ಡದು. ನೀರಿನ ಸರಬರಾಜು ಮಾಡುವಲ್ಲಿ ಶ್ರೀ ನಿತಿನ್ ಮತ್ತು ಶ್ರೀ ಚಂದ್ರುರವರನ್ನು ಸಂದರ್ಶಿಸಿದಾಗ ಅವರಿಂದಲೂ ನಮಗೆ ಸಾಕಷ್ಟು ಮಾಹಿತಿ ನೀಡಿದ್ದು ಅವರು "ದಿನಕ್ಕೆ ಎರಡುವರೆ ಲಕ್ಷ ನೀರು ಬಳಕೆಯಲ್ಲಿದೆ, ಅದರಲ್ಲಿ ಕುಡಿಯುವುದಕ್ಕೆ ಅರ್ಹವಾದ ನೀರು 40,000 ಲೀಟರ್, ಶೌಚಾಲಯಗಳಿಗೆ ಒಂದು ಲಕ್ಷ ಲೀಟರ್, ಇತರೆ ಅಂದರೆ ಅಡುಗೆ ಮುಂತಾದವುಗಳಿಗೆ ಉಳಿದ ಒಂದು ಲಕ್ಷ ಲೀಟರ್ ನೀರನ್ನು ಬಳಸುತ್ತಿದ್ದಾರೆ. ನೀರಿನ ಸರಬರಾಜು ಜವಾಬ್ದಾರಿಯನ್ನು ಎಲ್ಲರೂ ಉತ್ತಮವಾಗಿ ನಿರ್ವಹಿಸುತ್ತಿದ್ದಾರೆ ಎಂದರು. ಈ ಸಂಧರ್ಭದಲ್ಲಿ ಒಂದು ಘೋಷಣೆಯನ್ನು ಹೊರಡಿಸಿದ್ದು ಅದೇನೆಂದರೆ "ನೀರು ಜೀವನಾಮೃತ, ಹನಿ ಹನಿ ನೀರಿನಲ್ಲಿ ಜೀವವಿದೆ".

### ರಾಷ್ಟ್ರೀಯ ಶಿಕ್ಷಣ ನೀತಿ 2019ರ ವಿ.ಐ.ಎಸ್-ಎ-ವಿಐಎಸ್ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮತ್ತು ಸುಸ್ಥಿರ ಅಭಿವೃದ್ಧಿ ಗುರಿಗಳ ವಿಚಾರಗೋಷ್ಠಿ

30 ಡಿಸೆಂಬರ್ 2019 ರಂದು ಸುಸ್ಥಿರ ಅಭಿವೃದ್ಧಿಯ ಗುರಿಗಳ ವಿಚಾರಗೋಷ್ಠಿ ಉದ್ಘಾಟನಾ ಸಮಾರಂಭವು ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ರಾಜ್ಯ ಕಾರ್ಯದರ್ಶಿ ಶ್ರೀ ಕೆ. ಗಂಗಪ್ಪಗೌಡ ಅವರು ವೇದಿಕೆಯಲ್ಲಿದ್ದ ಗಣ್ಯರುಗಳನ್ನು ಸ್ವಾಗತಿಸಿದರು.

ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಶ್ರೀ ಎಸ್.ಆರ್. ಉಮಾಶಂಕರ್, ಮಾನ್ಯ ಪ್ರಧಾನ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ಶ್ರೀ ಯು.ಟಿ. ಖಾದರ್, ಮಾನ್ಯ ಶಾಸಕರು ಹಾಗೂ ಮಾಜಿ ನಗರಾಭಿವೃದ್ಧಿ ಸಚಿವರು, ಕರ್ನಾಟಕ ಸರ್ಕಾರ, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಚಿತ್ರದುರ್ಗದ ಚಲುವಾದಿಮಠದ ಪೂಜ್ಯ ಮಹಾಸ್ವಾಮಿಗಳು, ಶ್ರೀ ವಿಶ್ವನಾಥ್, ಶಿಕ್ಷಣ ಇಲಾಖೆಯ ಸಂಪನ್ಮೂಲವ್ಯಕ್ತಿ, ಶ್ರೀ ಹರಿಪ್ರಸಾದ್, ಹಿರಿಯ ಕ್ಷೇಮಾಭಿವೃದ್ಧಿ ಅಧಿಕಾರಿಗಳು ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದರು.

ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಗಣ್ಯರು ಗಿಡಕ್ಕೆ ನೀರೆರೆಯುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಪ್ರಾಸ್ತಾವಿಕ ನುಡಿಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಶ್ರೀ ಉಮಾಶಂಕರ್‌ರವರ ವಿಶೇಷ ಗುಣಗಳನ್ನು ಹಾಗೂ ಇಬ್ಬರ ಒಡನಾಟವನ್ನು ಪ್ರಸ್ತಾಪಿಸಿ ಶಿಕ್ಷಕರಿಗೆ ಸ್ಕೌಟಿಂಗ್‌ನಲ್ಲಿ ನೀಡುವ ಗೌರವಧನವನ್ನು ರೂ. 1000/-ಕ್ಕೆ ಹೆಚ್ಚಿಸಬೇಕು ಮತ್ತು ಪ್ರತಿ ಕ್ಷೇತ್ರಶಿಕ್ಷಣಾಧಿಕಾರಿಗಳು, ಮತ್ತು ಉಪನಿರ್ದೇಶಕರ ಸಭೆಗಳಲ್ಲಿ ಸೌಟ್ ಮತ್ತು ಗೈಡ್ ಚಳುವಳಿಯ ಬಗ್ಗೆ ಪ್ರಸ್ತಾಪಿಸಲು ಮನವಿ ಮಾಡಿದರು. ಎಲ್ಲಾ ಶಿಕ್ಷಕರನ್ನು ಸ್ಕೌಟ್-ಗೈಡ್ ತರಬೇತಿಗಳಿಗೆ/ ಚಟುವಟಿಕೆಗಳಿಗೆ ಅನ್ಯಕಾರ್ಯ ನಿಮಿತ್ತವೆಂದು ನಿಯೋಜಿಸಿ ಪರಿಗಣಿಸಲು ಕೋರಿಕೊಂಡರು.

ಶ್ರೀ ಎಸ್.ಆರ್. ಉಮಾಶಂಕರ್ ರವರು ತಮ್ಮ ಉದ್ಘಾಟನಾ ಭಾಷಣದಲ್ಲಿ ಸ್ಕೌಟ್ ಚಳುವಳಿಯಲ್ಲಿ ರಾಜ್ಯವು ಪ್ರಥಮ ಸ್ಥಾನದಲ್ಲಿ ಇರುವುದನ್ನು ಶ್ಲಾಘಿಸಿದರು. ತಾವು ವಿವಿಧ ಜಿಲ್ಲೆಗಳ ಜಿಲ್ಲಾಧಿಕಾರಿಗಳಾಗಿದ್ದಾಗ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜೊತೆಗಿನ ನಿಕಟ ಸಂಬಂಧವನ್ನು ನೆನಪಿಸಿಕೊಂಡರು. ದೊಡ್ಡಬಳ್ಳಾಪುರದ ಸ್ಕೌಟ್-ಗೈಡ್ ತರಬೇತಿ ಕೇಂದ್ರ ಸ್ಕೌಟಿಂಗ್ ಮತ್ತು ಗೈಡಿಂಗ್ ಮಕ್ಕಳಿಗೆ ಒಳ್ಳೆ ಕಾರ್ಯಕ್ರಮವನ್ನು ಒದಗಿಸಿದೆ ಎಂದು ಶ್ಲಾಘಿಸಿದರು. ಕೇಂದ್ರ ಸರ್ಕಾರದ ಶಿಕ್ಷಣದ ನೀತಿಯಲ್ಲಿ "ಮೆಕಾಲೇ ಶಿಕ್ಷಣ ಪದ್ದತಿಯಲ್ಲಿ" ಭಾರೀ ಬದಲಾವಣೆಯನ್ನು ಜಾರಿಗೆ ತರುತ್ತಿದೆ. ಇದರಲ್ಲಿ ಶಿಕ್ಷಕರುಗಳು ಪ್ರಮುಖ ಪಾತ್ರ ವಹಿಸುತ್ತಾರೆ. ಶ್ರೀ ಸಿ.ವಿ. ತಿರುಮಲರಾವ್ ಹಾಗೂ ಶ್ರೀ ಚಂದ್ರಶೇಖರ್, ಶಿಕ್ಷಣ ತಜ್ಞರ ಮಾತುಗಳಿಗೆ ಬಹಳ ಮಹತ್ವವಿದೆ ಮತ್ತು ಅವರ ಚಿಂತನೆಗಳು ನಮಗೆ ಸದಾ ನೆನಪಿನಲ್ಲಿ ಉಳಿಯುತ್ತದೆ ಎಂದರು. ರಾಜ್ಯ ಮುಖ್ಯ ಆಯುಕ್ತರು ಪ್ರಸ್ತಾಪಿಸಿದ ಬೇಡಿಕೆಗಳನ್ನು ಈಡೇರಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತೇನೆ ಎಂದರು.

ಶ್ರೀಯುತ ವಿಶ್ವನಾಥ್, ಹಿರಿಯ ಕ್ಷೇಮಾಭಿವೃದ್ಧಿ ಅಧಿಕಾರಿ, ಶಿಕ್ಷಣ ಇಲಾಖೆ, ಶಿವಮೊಗ್ಗ ಇವರು ರಾಷ್ಟ್ರೀಯ "ಶಿಕ್ಷಣ ನೀತಿ 2019" ಕರಡು ಪ್ರತಿಯಲ್ಲಿ ಶಿಕ್ಷಣ ನೀತಿ ವಿಷಯ ಮಹತ್ವವಾಗಿರುತ್ತದೆ ಮತ್ತು ಅದರ ನೀತಿಯ ಅನುಷ್ಠಾನ ತೀರ ಅವಶ್ಯಕತೆ ಎಂದರು. ಸಮಾಜದ ಸುಸ್ಥಿರತೆ ಮತ್ತು ಅಪನಂಬಿಕೆಗಳು ಶಿಕ್ಷಣ ನೀತಿಯಿಂದ ದೂರವಾಗಬೇಕು. ಸಾಮರ್ಥ್ಯಕ್ಕೆ ತಕ್ಕಂತೆ ಸಮಾನತೆ ಮತ್ತು ಗೌರವ ಸಲ್ಲಬೇಕು, ಜೀವಂತಿಕೆಯ ಸಮಾಜ ಸೃಷ್ಟಿಯಾಗಬೇಕು, ಪ್ರತಿಕ್ರಿಯೆ ಸ್ಪಷ್ಟವಾಗಿರಬೇಕು ಎಂದು ತಿಳಿಸಿದರು. 2030ರ ವೇಳೆಗೆ 60% ಜಾಗತಿಕ ಯುವರಾಷ್ಟ್ರವಾಗಿ ಭಾರತ ಹೊರಹೊಮ್ಮಬೇಕು. ಅದು ರಾಷ್ಟ್ರದ ಯುವಜನತೆಯ ಭವಿಷ್ಯವನ್ನು ನಿರ್ಧರಿಸುತ್ತದೆ. ಆರ್ಥಿಕ ಶಕ್ತಿಯನ್ನು ಹೆಚ್ಚಿಸುತ್ತದೆ. ಮುಂದೆ ಮಾಹಿತಿ ಪ್ರಮಾಣ ಹೆಚ್ಚಾಗಿ ಸೃಜನಾತ್ಮಕ ಹಾಗೂ ಮಹತ್ವ ಪಾತ್ರವನ್ನು ವಹಿಸುತ್ತದೆ ಎಂದರು. "ಅಕ್ಷರತೆಗೆ ಭುನಾದಿಯೇ ಸಾಕ್ಷರತೆ" ಮಾಹಿತಿ ನಿಪುಣತೆ ಸಮ್ಮಿಲತೆಯೇ ಮೌಲ್ಯಮಾಪನವಾಗಿರುತ್ತದೆ. ಆರ್.ಟಿ.ಇ (ಉಚಿತ ಶಿಕ್ಷಣ) 1 ರಿಂದ 12ನೇ ತರಗತಿಯವರೆಗೆ ಅನ್ವಯಿಸುತ್ತದೆ. ಸರ್ಕಾರ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಸಮಾನತೆ ಇರುತ್ತದೆ ಎಂದು ತಿಳಿಸಿದರು.

ಶ್ರೀ ಬಿ.ಕೆ. ಬಸವರಾಜ, ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್ಸ್) ಮಾತನಾಡಿ, ವಿಶ್ವಸಂಸ್ಥೆಯಲ್ಲಿನ 193 ಸದಸ್ಯ ರಾಷ್ಟ್ರಗಳು ಈ ಕೆಳಕಂಡ ಶಿಕ್ಷಣದ ಅಂಶಗಳನ್ನು ಅಂಗೀಕರಿಸಿದೆ ಎಂದು ಸಭೆಯ ಗಮನಕ್ಕೆ ತಂದರು.

1. ಬಡತನ ನಿರ್ಮೂಲನೆ, 2. ಆರೋಗ್ಯಕರ ಜೀವನ 3. ಜಲ ಸಂರಕ್ಷಣೆ, 4. ಸಮಾನತೆ, 5. ಆಧುನಿಕ ಇಂಧನ 6. ಉತ್ಪಾದಕ ಶಕ್ತಿ, 7. ಅಸಮಾನತೆಯ ನಿರ್ಮೂಲನೆ 8. ಮಾನವ ಪ್ರಬುದ್ಧತೆ, 9. ಪ್ರಕೃತಿ ರಕ್ಷಣೆ, 10. ಪ್ರಾಕೃತಿಕ ಸಮತೋಲನ, 11. ನ್ಯಾಯ ಸಮಾನತೆ

ಡಾ॥ ಜಿ.ವಿ. ಹರಿಪ್ರಸಾದ್, ಹಿರಿಯ ಪ್ರಾಧ್ಯಾಪಕರು, ಡಯಟ್, ಶಿವಮೊಗ್ಗ ಇವರು ರಾಷ್ಟ್ರೀಯ ಶಿಕ್ಷಣ ನೀತಿಯ ಕರಡು ಪ್ರತಿಯಲ್ಲಿ 484 ಪುಟಗಳಿವೆ, 134 ಪುಟ ಶಿಕ್ಷಕರ ಬಗ್ಗೆ ಇದೆ. ಚಿಂತನೆ ಮಾಡುವ ಮತ್ತು ಕಾರ್ಯಗತ ಮಾಡುವ ಶಿಕ್ಷಕರ ಅವಶ್ಯಕತೆ ಇದೆ. 1ನೇ ತರಗತಿಯಿಂದ 12ನೇ ತರಗತಿಯವರೆಗೆ ಶಿಕ್ಷಕರ ಅರ್ಹತೆ ಮತ್ತು ಸಂಭಾವನೆ ಸಮಾನವಾಗಿ ಇರುತ್ತದೆ. ಶಿಕ್ಷಕರು ತಮ್ಮ ಸಾಮರ್ಥ್ಯದಿಂದ ತಮ್ಮ ಸ್ಥಾನವನ್ನು ಹೆಚ್ಚಿಸಿಕೊಳ್ಳುತ್ತಾರೆ. ಶಿಕ್ಷಕರು ತಮ್ಮ ಸಂಬಳದಿಂದಲೇ ತಮ್ಮ ತರಬೇತಿಯನ್ನು ಪಡೆದು ಉತ್ತಮ ಸ್ಥಾನಕ್ಕೆ ಏರಬೇಕಾಗುತ್ತದೆ. ಶಿಕ್ಷಕರು ಒಂದು ವರ್ಷದಲ್ಲಿ 50 ಗಂಟೆಗಳ ಅವಧಿ ಕಲಿಯಲು ಮೀಸಲಾಗಿ ಇಡಬೇಕಾಗುತ್ತದೆ. ಒಟ್ಟು 6 ಕೋಟಿ 58 ಲಕ್ಷ ಕಲಿಕಾ ಸಾಮಾಗ್ರಿಗಳು ಇವೆ ಎಂದು ತಿಳಿಸಿದರು.

## ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ನೆನಪಿನಂಗಳ ತೋಟದ ಉದ್ಘಾಟನೆ

ತರಬೇತಿ ಕೇಂದ್ರದಲ್ಲಿ ಪ್ರತಿ ಜಿಲ್ಲೆಗಳ ಹೆಸರಿನಲ್ಲಿ ಒಂದೊಂದು ಗಿಡವನ್ನು ನೆಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದ್ದು, ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಡಾ.ಕೆ.ಜಿ. ಜಗದೀಶ್, ನಿವೃತ್ತ ಎ.ಡಿ.ಜಿ.ಪಿ ಶ್ರೀ ಗೋಪಾಲ್ ಹೊಸೂರ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ, ಡಿಡಿಪಿಐ ಶ್ರೀ ಕೃಷ್ಣಮೂರ್ತಿ, ಡಾ.ಹಿತ್ತಲಮನಿ, ನಿವೃತ್ತ ಅಪರನಿರ್ದೇಶಕರು, ತೋಟಗಾರಿಕೆ ಇಲಾಖೆ, ಶ್ರೀನಾಗೇಶ್, ಡಯಟ್ ಪ್ರಿನ್ಸಿಪಾಲ್, ಶ್ರೀ ರಕ್ಷಿತ್ ಜಗದಾಳೆ ಮೆ॥ ಜಗದಾಳೆ ಗ್ರೂಪ್ ಆಫ್ ಕಂಪನಿ ಮಾಲೀಕರು, ಶ್ರೀ ಕೆ. ಗಂಗಪ್ಪಗೌಡ ರಾಜ್ಯ ಕಾರ್ಯದರ್ಶಿಗಳು ಶ್ರೀ ಬಿ.ಕೆ ಬಸವರಾಜ, ಜಂಟಿ ರಾಜ್ಯ ಕಾರ್ಯದರ್ಶಿಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಅತಿಥಿಗಳು ಗಿಡಗಳನ್ನು ನೆಟ್ಟು ನೀರೆರೆಯುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಪಿ.ಜಿ.ಆರ್ ಸಿಂಧ್ಯಾ ಅವರು ಕಾರ್ಯಕ್ರಮಕ್ಕೆ ಆಗಮಿಸಿದ ಮುಖ್ಯ ಅತಿಥಿಗಳನ್ನು ಪರಿಚಯಿಸಿದರು. ಡಾ.ಹಿತ್ತಲಮನಿ ಅವರು ಭಾರತ್ ಸ್ಕೌಟ್ಸ್ ಅಂಡ್ ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಎಲ್ಲಾ ಕಡೆಗಳಲ್ಲಿ ಗಿಡಗಳನ್ನು ನೆಡುವ ಕಾರ್ಯಕ್ರಮವನ್ನು ಆರಂಭಿಸಿ ಒಂದು ವರ್ಷ ಕಳೆದಿದೆ. ಬರುವ ದಿನಗಳಲ್ಲಿ ನಾವು ಬೇಸಿಗೆ ಶಿಬಿರವನ್ನು ಒಂದು ತಿಂಗಳ ಕಾಲ ಉಚಿತವಾಗಿ ಈಜುವ ತರಬೇತಿಯನ್ನು ಈ ಕೇಂದ್ರದಲ್ಲಿ ನೀಡಲಿದ್ದೇವೆ. ರಾಜ್ಯ ಸ್ವಿಮ್ಮಿಂಗ್ ಅಸೋಸಿಯೇಶನ್, ಸ್ಕೌಟ್ಸ್ ಅಂಡ್ ಗೈಡ್ಸ್, ಎನ್.ಎಸ್.ಎಸ್, ಎನ್.ಸಿ.ಸಿ ಇವೆಲ್ಲವೂ ಒಟ್ಟಾಗಿ ಕೆಲಸ ಮಾಡಿ ದೇಶ ಕಟ್ಟುವಲ್ಲಿ ನೆರವಾಗಬೇಕು ಎಂದರು.

ಡಾ. ಕೆ.ಜಿ. ಜಗದೀಶ್, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಮಾತನಾಡಿ ತಮ್ಮ ಇಲಾಖೆಯಿಂದ ನೀಡಬೇಕಾದ ಮೂಲಭೂತ ಸೌಕರ್ಯಗಳನ್ನು ಒದಗಿಸುವುದಾಗಿ ಹಾಗೂ ಇಲಾಖೆಯಿಂದ ದೊರೆಯಬೇಕಾದ ಬೆಂಬಲವನ್ನು ನೀಡುವುದಾಗಿ ಹೇಳಿದರು. ನಂತರದಲ್ಲಿ ಮಾತನಾಡಿದ ಕರ್ನಾಟಕ ಈಜು ಸಂಸ್ಥೆಯ ಅಧ್ಯಕ್ಷರಾದ ಶ್ರೀ ಗೋಪಾಲ ಹೊಸೂರ್ ಅವರು

ಶಿಕ್ಷಣದ ಕೊರತೆಯು ಈ ದೇಶವನ್ನು ಕಾಡುತ್ತಿದೆ. ಸಂಪೂರ್ಣವಾದ ಬೆಳವಣಿಗೆ ಹೊಂದಬೇಕಾದರೆ ಎರಡು ಕಾರಣ ಏನೆಂದರೆ ಭ್ರಷ್ಟಾಚಾರ ಮತ್ತು ಜಾತೀಯತೆ, ಇವರೆಡನ್ನು ಎದುರಿಸಬೇಕು. ಈ ಎರಡು ವಿರೋಧಿ ಭಾವನೆಗಳನ್ನು ಮಕ್ಕಳಲ್ಲಿ ಮತ್ತು ಯುವಕರಲ್ಲಿ ಬೆಳೆಸಬೇಕು, ಆಗ ದೇಶ ಉನ್ನತ ಸ್ಥಾನಕ್ಕೆ ಏರುತ್ತದೆ, ಈ ವಿಷಯಗಳು ಸ್ಕೌಟ್‌ನಲ್ಲಿ ಇರುವುದರಿಂದ ಇದು ದೇಶದ ಬೆಳವಣಿಗೆಗೆ ಪೂರಕವಾಗಿದೆ. ನಮ್ಮ Swimming Association ಮತ್ತು ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಸಹಭಾಗಿತ್ವದಲ್ಲಿ ಈಗಿರುವ ಈಜುಕೊಳವನ್ನು ಸುಸಜ್ಜಿತವಾಗಿ ಪರಿವರ್ತಿಸಿ ಎಲ್ಲಾ ಶಿಬಿರಗಳಲ್ಲಿ ಇದರ ಸದುಪಯೋಗ ಪಡೆಯುವಂತೆ ಮಾಡಲು ಪ್ರಯತ್ನಿಸಲಾಗುವುದೆಂದರು. ಪ್ರತಿ ಜಿಲ್ಲೆಯ ಹೆಸರಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಂದ ಗಿಡಗಳನ್ನು ನೆಡಿಸಲಾಯಿತು.

## ಹೊರಾಂಗಣ ಚಟುವಟಿಕೆಯಲ್ಲಿ ಮನೆ-ಮನೆ ಭೇಟಿ

ಅರೆಹಳ್ಳಿಯಲ್ಲಿ ಗ್ರಾಮದ ಜನರ ಸಹಾಯದೊಂದಿಗೆ ಹಳ್ಳಿಯನ್ನು ಸ್ವಚ್ಛತೆ ಮಾಡಲಾಯಿತು. ಓಬದೇನಹಳ್ಳಿಯಲ್ಲಿ ಗ್ರಾಮದ ಜನರು ಮತ್ತು ಮಕ್ಕಳ ಸಹಾಯದೊಂದಿಗೆ ಅಲ್ಲಿನ ಮುಖ್ಯೋಪಾಧ್ಯಾಯರು ಸಹಕಾರ ನೀಡಿದರು. ಬನ್ನಿಮಂಗಲದಲ್ಲಿ ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಕೆ.ಜಿ ನಾಗರಾಜ್ ಮತ್ತು ಗ್ರಾಮ ಪಂಚಾಯಿತಿಯ ಸದಸ್ಯರಾದ ಶ್ರೀ ರಾಜಣ್ಣ ಉಪಸ್ಥಿತರಿದ್ದರು. ಈ ಸಮಯದಲ್ಲಿ ಶ್ರೀ ಪ್ರತೀಮ್ ಕುಮಾರ್ ಮತ್ತು ಶ್ರೀಮತಿ ಭಾರತಿ ಡಯಾಸ್‌ರವರು ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

## ಯುವ ಸಂಸತ್ತು

"ಯುವ ಸಂಸತ್ತು" ಕಾರ್ಯಕ್ರಮವನ್ನು 30 ಡಿಸೆಂಬರ್ 2019 ರಂದು ರಾಜ್ಯದ ವಿಧಾನಸಭೆಯ ಮಾಜಿ ಸಭಾಧ್ಯಕ್ಷರಾದ ಶ್ರೀ ಕೆ.ಆರ್. ರಮೇಶ್ ಕುಮಾರ್ ಅವರು ಉದ್ಘಾಟಿಸಿದರು. ಸಭೆಯನ್ನು ಉದ್ದೇಶಿಸಿ ಮಾತನಾಡಿದ ಶ್ರೀ ಕೆ.ಆರ್. ರಮೇಶ್ ಕುಮಾರ್ ಅವರು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಒಬ್ಬ ಸಮರ್ಥ ನಾಯಕರಿದ್ದು, ಅವರು ಶಾಸಕರಾಗಿ, ಮಂತ್ರಿಗಳಾಗಿ ಅನೇಕ ಸಮಾಜಮುಖಿ ಕೆಲಸಗಳನ್ನು ಮಾಡಿದ್ದು, 1996ರಲ್ಲಿ ಅವರು ಗೃಹ ಮಂತ್ರಿಯಾಗಿದ್ದಾಗ ನಾನು ಸ್ಪೀಕರ್ ಆಗಿ ಕಾರ್ಯನಿರ್ವಹಿಸಿದ್ದೆ. ಯುವ ಸಂಸತ್ ಕಾರ್ಯಕ್ರಮ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರ ದೂರದೃಷ್ಟಿಯ ಪರಿಕಲ್ಪನೆಯಾಗಿದ್ದು ಸಮಾಜದಲ್ಲಿ ಯುವಕರನ್ನು ಉತ್ತಮ ನಾಯಕರನ್ನಾಗಿ ರೂಪಿಸುವ ನಿಟ್ಟಿನಲ್ಲಿ ಅವರಿಗೆ ಸಂಸತ್ತು ಹೇಗೆ ಕಾರ್ಯನಿರ್ವಹಿಸುತ್ತದೆ ಮತ್ತು ಹೇಗಿರಬೇಕು ಎಂದು ತಿಳಿಸುವ ಸಲುವಾಗಿ ಈ ಕಾರ್ಯಕ್ರಮವನ್ನು ಆಯೋಜಿಸಿದ್ದಾರೆ ಎಂದರು.

ಮುಂದುವರೆದು ಮಾತನಾಡಿದ ಅವರು ರಾಜಪ್ರಭುತ್ವದಿಂದ ಭಾರತಕ್ಕೆ ಪ್ರಜಾಪ್ರಭುತ್ವ ಹೇಗೆ ಬಂತು ಎನ್ನುವುದರ ಹಿನ್ನೆಲೆಯಿಂದ ಸಂವಿಧಾನದ ರಚನೆ, ಸಂಸತ್ತಿನ ಪರಿಕಲ್ಪನೆ ಮತ್ತು ಕಾನೂನು ಹೇಗೆ ರೂಪುಗೊಳ್ಳುತ್ತದೆ? ಕಾನೂನನ್ನು ರೂಪಿಸುವುದು ಯಾರು? ಹೇಗೆ ಕಾನೂನು ರೂಪುಗೊಳ್ಳುತ್ತದೆ, ಸಂಸದರ ಜವಾಬ್ದಾರಿ ಮತ್ತು ಸಂಸತ್ತಿನ ಜವಾಬ್ದಾರಿ ಹಾಗೂ ಸಂಸತ್ ನಡೆಯುವಾಗ ಸ್ಪೀಕರ್‌ಗೆ ಇರುವ ಅಧಿಕಾರ ಮತ್ತು ಜವಾಬ್ದಾರಿಯನ್ನು ಮಕ್ಕಳಿಗೆ ಅರ್ಥಗರ್ಭಿತವಾಗಿ ವಿವರಿಸಿದರು.

ಇಂದು ನೀವು ನಡೆಸಿಕೊಡುವ ಸಂಸತ್ತು ನಮ್ಮ ನಿಜವಾದ ಸಂಸತ್ತಿಗೆ ಒಂದು ಮಾದರಿಯಾಗಬೇಕು. ಇದೇ ರೀತಿಯಲ್ಲಿ ನಿಮ್ಮ ಪ್ರಶ್ನೋತ್ತರಗಳು ಇರಲಿ ಎಂದು ಹಾರೈಸಿ ನೀವು ಹೇಗೆ ಪ್ರಶ್ನೆಗಳನ್ನು ಕೇಳುತ್ತೀರಿ ಮತ್ತು ಸರ್ಕಾರದ ಪರವಾಗಿ ಕುಳಿತವರು ಯಾವರೀತಿ ಅದಕ್ಕೆ ಉತ್ತರವನ್ನು ಹೇಳುತ್ತಾರೆ ಎನ್ನುವುದನ್ನು ನಾನು ಕೊನೆಯವರೆಗೂ ಕುಳಿತು ಕಾರ್ಯಕ್ರಮವನ್ನು ವೀಕ್ಷಿಸುತ್ತೇನೆ ಎಂದು ಹೇಳಿ ಕಾರ್ಯಕ್ರಮದ ಕೊನೆಯವರೆಗೂ ಉಪಸ್ಥಿತರಿದ್ದು ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಸ್ಫೂರ್ತಿ ತುಂಬಿದರು.

## ಸಾಂಸ್ಕೃತಿಕ ಪ್ರದರ್ಶನ ಹಾಗೂ ಭವ್ಯ ಶಿಬಿರಾಗ್ನಿ

28ನೇ ರಾಜ್ಯ ಮಟ್ಟದ ಜಾಂಬೋರೇಟ್ ಅಂಗವಾಗಿ ದಿನಾಂಕ 01.01.2020 ಬುಧವಾರ ಶ್ರೀ ಟಿ.ಎನ್. ಸೀತಾರಾಮ್, ಕಿರುಚಿತ್ರಗಳ ಹೆಸರಾಂತ ನಿರ್ದೇಶಕರು ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀಮತಿ ಜಿ.ವಿ. ರೇಣುಕ, ರಾಷ್ಟ್ರಪ್ರಶಸ್ತಿ ಪುರಸ್ಕೃತ ಸಾಹಿತಿಗಳು, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಉಪಾಧ್ಯಕ್ಷರು, ದಾನಿಗಳಾದ ಶ್ರೀಯುತ ಕೆ.ಪಿ. ವೆಂಕಟೇಶ್‌ಮೂರ್ತಿ ಅವರುಗಳು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ನಂತರ ಶ್ರೀ ಟಿ.ಎನ್. ಸೀತಾರಾಮ್ ಅವರು ಚಂಡೆ, ಡೋಲು, ಚಪ್ಪಾಳೆಗಳ ಮೂಲಕ ಸಾಂಸ್ಕೃತಿಕ ಪ್ರದರ್ಶನ ಉದ್ಘಾಟನೆಯನ್ನು ನೇರವೇರಿಸಿದರು. 1907ರಲ್ಲಿ ಮನುಷ್ಯನ ನಾಗರಿಕತೆಗೆ ಉದಾತ್ತ ಧ್ಯೇಯವನ್ನು ಅಳವಡಿಸಿಕೊಂಡು ಪ್ರಾರಂಭವಾಗಿ ರಾಷ್ಟ್ರಮಟ್ಟದ ಸುಮಾರು 55ಲಕ್ಷ ಸಮವಸ್ತ್ರ ಧರಿಸಿ ಆಂದೋಲನದಲ್ಲಿ ಭಾಗವಹಿಸಿರುವ, ಶಿಸ್ತು, ಸೇವೆಗೆ ಹೆಸರಾದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಜಗತ್ತಿನಲ್ಲಿ ಇನ್ನೂ ಹೆಚ್ಚು ಹೆಚ್ಚು ಹರಡಬೇಕೆಂದು ಆಶಯ ವ್ಯಕ್ತಪಡಿಸಿದರು.

ಶ್ರೀಮತಿ ಜಿ.ವಿ. ರೇಣುಕ, ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಸಾಹಿತಿಗಳು ಮಾತನಾಡಿ ಸಾಹಿತ್ಯದಲ್ಲಿ ಮಕ್ಕಳು ಮತ್ತು ಮಹಿಳೆಯರು ಅಭಿರುಚಿಯನ್ನು ಬೆಳಸಿಕೊಳ್ಳಬೇಕು. ಉತ್ತಮ ಪ್ರಜೆಗಳಾಗಲು ಉತ್ತಮ ಸಂಸ್ಕಾರಗಳನ್ನು ಬೆಳಸಿಕೊಳ್ಳಬೇಕು ಎಂದರು.

ನಂತರ ಜರುಗಿದ ಸಾಂಸ್ಕೃತಿಕ ಪ್ರದರ್ಶನದಲ್ಲಿ ರಾಜ್ಯದ ಎಲ್ಲಾ 35 ಜಿಲ್ಲೆಗಳಿಂದ ತಮ್ಮ ತಮ್ಮ ಜಿಲ್ಲೆಗಳ ವೈಶಿಷ್ಟತೆಯನ್ನು ಪ್ರದರ್ಶಿಸಿದರು. ಬೀದರ್‌ನಿಂದ ಚಾಮರಾಜನಗರದವರೆಗೆ ಅನೇಕ ವೈವಿಧ್ಯಮಯ ಉಡುಪುಗಳನ್ನು ಧರಿಸಿ ವಾದ್ಯಗೋಷ್ಠಿಯೊಂದಿಗೆ ಹೆಜ್ಜೆ ಹಾಕಿದರು. ಈ ಸಂದರ್ಭದಲ್ಲಿ ದಾನಿಗಳಾದ ಶ್ರೀಯುತ ಕೆ.ಪಿ. ವೆಂಕಟೇಶ್ ಮೂರ್ತಿರವರು ತಮ್ಮ ತಂದೆಯವರ ಸವಿನೆನಪಿಗಾಗಿ 30 ಬೆಳ್ಳಿ ಕಪ್, 1000 ಟರ್ಕಿ ಟವೆಲ್ ಹಾಗೂ ಮುಂದಿನ ವಿಶ್ವ ಜಾಂಬೋರಿಗೆ 50 ಲಕ್ಷ ದೇಣಿಗೆಯನ್ನು ಮತ್ತು ಡಾ. ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ನಿರ್ಮಾಣ ಮಾಡಲಿರುವ ಅತಿಥಿಗೃಹ ನಿರ್ಮಾಣ ಮಾಡಲು 1 ಕೋಟಿ ನೀಡುವುದಾಗಿ ಘೋಷಿಸಿದರು. ತಮ್ಮ ತಂದೆಯವರ ಹೆಸರಿನಲ್ಲಿರುವ "ಶಾನುಭೋಗ್ ದಾಸಪ್ಪ

ದತ್ತಿಯಿಂದ" ರಾಜ್ಯದ ಸ್ಕೌಟ್-ಗೈಡ್ ಚಳುವಳಿಯ ನೇತೃತ್ವ ವಹಿಸಿ ಈ ಕಾರ್ಯಕ್ರಮದ ಯಶಸ್ವಿಗೆ ಕಾರಣಕರ್ತರಾದ ಶ್ರೀ ಪಿ.ಜಿ.ಆರ್.ಸಿಂಧ್ಯ ಅವರಿಗೆ ಶಾಲನ್ನು ಹೊದಿಸಿ ಬೆಳ್ಳಿಯ ಕಿರೀಟವನ್ನು ಧರಿಸಿ ಸನ್ಮಾನಿಸಿದರು. ಶ್ರೀ ಸಿಂಧ್ಯರವರು ತಮಗೆ ಈ ಹಿಂದೆ 6 ಬಾರಿ "ಬೆಳ್ಳಿ ಕಿರೀಟ"ವನ್ನು ಅಭಿಮಾನಗಳು ನೀಡಿರುವುದನ್ನು ಸ್ಮರಿಸಿದರು. ತಾವು ಪಡೆದ "ಬೆಳ್ಳಿ ಕಿರೀಟ"ವನ್ನು ಮತ್ತು "ಬೆಳ್ಳಿಯ ವಸ್ತು"ಗಳನ್ನು ಸಂಸ್ಥೆಯಲ್ಲಿಯೇ ಇಡುವುದಾಗಿ ಹೇಳಿದರು. ಇದು ಶ್ರೀಯುತ ವೆಂಕಟೇಶ್‌ಮೂರ್ತಿ ಅವರಂತಹ ದಾನಿಗಳ ನೆನಪನ್ನು ಸ್ಮರಿಸುತ್ತದೆ ಹಾಗು ಇದೇ ಸಂದರ್ಭದಲ್ಲಿ ಶ್ರೀಯುತ ವೆಂಕಟೇಶ್‌ಮೂರ್ತಿ ಅವರಿಗೆ ಶಾಲು ಮತ್ತು ಪೇಟ ಧರಿಸಿ, ಸ್ಮರಣಿಕೆ ನೀಡಿ ಗೌರವಿಸಲಾಯಿತು. ವಂದಾನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

ಶಿಬಿರದ ಕೊನೆಯ ರಾತ್ರಿ ಬುಧವಾರ ಭವ್ಯ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ಸಮಾಜ ಸೇವಕರಾದ ಅರಸೀಕೆರೆ ಶ್ರೀ ಕೆ.ಪಿ. ವೆಂಕಟೇಶ ಮೂರ್ತಿರವರು ಭಾಗವಹಿಸಿ ರಾಜ್ಯ ಸಂಸ್ಥೆ ಆಯ್ಕೆ ಮಾಡಿದ ಸ್ಕೌಟ್-ಗೈಡ್‌ಗಳಿಗೆ ತಾವು ನೀಡಿದ ಬೆಳ್ಳಿ ಲೋಟಗಳನ್ನು ನೆನಪಿನ ಕಾಣಿಕೆಯಾಗಿ ನೀಡಿದರು. ಕಾರ್ಯಕ್ರಮದಲ್ಲಿ ಮಕ್ಕಳ ವೇಷಭೂಷಣ ಸ್ಪರ್ಧೆ, ಪಥಸಂಚಲನ ಮುಂತಾದ ಕಾರ್ಯಕ್ರಮಗಳನ್ನು ಪ್ರದರ್ಶಿಸಲಾಯಿತು.

## ಬೆಟರ್ ವರ್ಲ್ಡ್ (ಉತ್ತಮ ಜಗತ್ತು)

"ಬೆಟರ್ ವರ್ಲ್ಡ್" ಎಂಬುವುದು ವಿಶ್ವ ಸ್ಕೌಟ್ಸ್ ಸಂಸ್ಥೆಯ ಉಪಕ್ರಮಗಳನ್ನು ಹಿಡಿದ ಕೊಡೆಯಾಗಿದೆ. ಇದರಲ್ಲಿ ಅತ್ಯುಪಯುಕ್ತವಾದ ಕಲಿಕಾ ವಿಷಯಗಳಾದ "ಸ್ಕೌಟ್ಸ್ ಗೋ ಸೋಲಾರ್", "ವಿಶ್ವ ಸ್ಕೌಟ್ ಪ್ರಶಸ್ತಿ", "ಶಾಂತಿಗಾಗಿ ಮಾತುಕತೆ", "17 ಸುಸ್ಥಿರ ಅಭಿವೃದ್ಧಿಯ ಗುರಿಗಳು", "ಭಾವಚಿತ್ರ" "ಮತಗಟ್ಟೆ", "Scout.org" ಜಾಲತಾಣಕ್ಕೆ ಮಕ್ಕಳ ನೋಂದಣಿ, ಪ್ಲಾಸ್ಟಿಕ್ ಉಬ್ಬರವಿಳಿತದ ಟರ್ನರ್‌ಗಳು, ಚಿತ್ರಮಂದಿರ, ಶಾಂತಿಯ ಸಂದೇಶವಾಹಕದ ಚಟುವಟಿಕೆಗಳಾದ ಸಂಕೀರ್ಣ ವ್ಯವಸ್ಥೆಯ ಆಟ , ಅ-ಲೇ-ಲೇ ಅಭಿನಯ ಗೀತೆ ಹಾಗೂ ಬೀಟ್ಸ್ ನೃತ್ಯಗಳನ್ನು ತಿಳಿಸಿಕೊಡಲಾಯಿತು. ಸುಮಾರು 3650 ಮಕ್ಕಳು ತುಂಬಾ ಉತ್ಸಾಹದಾಯಕವಾಗಿ ಕಲಿತು, ಅರ್ಹ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ತಮ್ಮ "ರಿಂಗ್ ಬ್ಯಾಡ್ಜ್"ಗಳನ್ನು ಪಡೆದು ಸಂತಸಪಟ್ಟರು.

## ಸರ್ವಧರ್ಮ ಪ್ರಾರ್ಥನೆ

01 ಜನವರಿ 2020 ರಂದು ಬೆಳಗ್ಗೆ 10 ಗಂಟೆಗೆ ಶ್ರೀ ಸುತ್ತೂರು ಮಠದ ಜಗದ್ಗುರುಗಳಾದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳ ದಿವ್ಯ ಸಾನಿಧ್ಯದಲ್ಲಿ, ಮಾನ್ಯ ಮಾಜಿ ಪ್ರಧಾನ ಮಂತ್ರಿಗಳಾದ ಶ್ರೀ ಎಚ್.ಡಿ. ದೇವೇಗೌಡರವರು, ಮಾಜಿ ಸಚಿವರಾದ ಶ್ರೀ ಯು.ಟಿ ಖಾದರ್ ಮತ್ತು ಬೀದರ್ ಜಿಲ್ಲೆಯ ಹಿರಿಯ ಶಿಕ್ಷಣ ತಜ್ಞ ಡಾ. ಅಬ್ದುಲ್ ಖದೀರ್ ಹಾಗೂ ಕ್ರೈಸ್ತ ಸಮಾಜದ ಪಾದ್ರಿಗಳು ಮತ್ತು ಹಿರಿಯ ಸಾಹಿತಿಗಳಾದ ಡಾ॥ ಗೊ.ರು ಚನ್ನಬಸಪ್ಪ ಸರ್ವಧರ್ಮ ಪ್ರಾರ್ಥನೆಯಲ್ಲಿ ಭಾಗವಹಿಸಿದ್ದರು, ಕಾರ್ಯಕ್ರಮಕ್ಕೆ ಆಗಮಿಸಿದ ಎಲ್ಲ ಗಣ್ಯರನ್ನು ರಾಜ್ಯ ಮುಖ್ಯ ಆಯುಕ್ತರು ಸ್ವಾಗತಿಸಿದರು.

ಅವರು ಮುಂದುವರೆದು, ರಾಷ್ಟದ ಮಾಜಿ ಪ್ರಧಾನಿಗಳಾದ ಗೌರವಾನ್ವಿತ ಶ್ರೀ ಹೆಚ್.ಡಿ. ದೇವೇಗೌಡರವರು ರಾಜಕೀಯ ಜೀವನದಲ್ಲಿ ಮುಖ್ಯಮಂತ್ರಿಯಾಗಿ, ಪ್ರಧಾನಮಂತ್ರಿಯಾಗಿ ಯಾವುದೇ ಕಪ್ಪುಚುಕ್ಕೆ ಇಲ್ಲದಂತಹ ಹಿರಿಯ ಅನುಭವಿ ರಾಜಕಾರಣಿಗಳು, ಮಕ್ಕಳಿಗೆ ಮಾರ್ಗದರ್ಶನ ಮಾಡಲಿಕ್ಕೆ ಬಂದಿರುವುದು, ಮಕ್ಕಳ ಪಾಲಿಗೆ ಅತ್ಯಂತ ಸಂತೋಷದ ಸಂಗತಿಯಾಗಿದೆ ಎಂದರು ಹಾಗೂ ವೇದಿಕೆಯ ಮೇಲೆ ಉಪಸ್ಥಿತರಿದ್ದ ಎಲ್ಲ ಗಣ್ಯರನ್ನೂ ಸ್ವಾಗತಿಸಿದರು.

ಮುಂದುವರೆದು ಮಾತನಾಡಿ, ಶ್ರೀ ಹೆಚ್.ಡಿ. ದೇವೇಗೌಡರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ವಿಶ್ವಸಂಸ್ಥೆಯ ಕಾರ್ಯಕ್ರಮಕ್ಕೆ ಹೋಗಬೇಕಾಗಿದ್ದನ್ನು ಒಂದು ದಿನ ಮುಂದೂಡಿ 1995ರಲ್ಲಿ ಬೀದರ್ ಜಾಂಬೂರೇಟ್‌ನಲ್ಲಿ ಭಾಗವಹಿಸಿದ್ದು, ಸ್ಕೌಟ್ ಮತ್ತು ಗೈಡ್ ಇತಿಹಾಸದಲ್ಲಿ ದಾಖಲೆಯಾಗಿ ಉಳಿದಿದೆ ಎಂದು ಸ್ಮರಿಸಿದರು.

ಶ್ರೀ ಸುತ್ತೂರು ಮಠದ ಪೂಜ್ಯರು ಮಾತನಾಡಿ ಎಲ್ಲಾ ಧರ್ಮದ ಮೂಲ ಒಂದೇ ಆಗಿದೆ, ಆದರೆ ಧರ್ಮಗಳನ್ನು ನೋಡುವ ದೃಷ್ಟಿಕೋನ ಬೇರೆ ಬೇರೆಯಾಗಿದ್ದು ಕುರುಡರು ಆನೆಯನ್ನು ಮುಟ್ಟಿ ತಮ್ಮ ಅನುಭವ ಹೇಳಿಕೊಂಡಂತೆ ಆಗಿದೆ ಹಾಗೂ ಎಲ್ಲಾ ಧರ್ಮಗಳ ಆಶಯಗಳೂ ದೇವರನ್ನು ಕಾಣುವುದೇ ಆಗಿದೆ ಎಂದು ಹೇಳಿದರು. ಮಾಜಿ ಪ್ರಧಾನಿಗಳಾದ ಮಾನ್ಯ ಶ್ರೀ ದೇವೇಗೌಡರು ಮಾತನಾಡಿ ಶ್ರೀ ಸಿಂಧ್ಯರವರು ಸಮರ್ಥ ನಾಯಕರಾಗಿ ಯಾವುದೇ ಕೆಲಸವನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸುತ್ತಾರೆ, ಇದನ್ನು ನಾನು ವೈಯಕ್ತಿಕವಾಗಿ ಬಲ್ಲೆ ಹಾಗೂ ಈ ಕಾರ್ಯಕ್ರಮದಲ್ಲಿ ಅವರು ಇದನ್ನು ಮತ್ತೊಮ್ಮೆ ಸಾಬೀತು ಮಾಡಿದ್ದಾರೆ, ಇದು ಅವರ ನಾಯಕತ್ವಕ್ಕೆ ಹಿಡಿದ ಕನ್ನಡಿಯಾಗಿದೆ ಎಂದರು. ಅವರ ನಾಯಕತ್ವದಲ್ಲಿ ಮುನ್ನಡೆಯುತ್ತಿರುವ ನೀವು ಸಮಾಜದ ಹಲವಾರು ವಿಚಾರಗಳನ್ನು ಪರಾಮರ್ಶಿಸಿ, ಸತ್ಯವನ್ನು ಮನಗಂಡು ರಾಷ್ಟ್ರ ಕಟ್ಟುವ ನಿಟ್ಟಿನಲ್ಲಿ ಮುಂದೆ ಹೆಜ್ಜೆ ಇಡಬೇಕು, ರಾಷ್ಟವನ್ನು ಬಲಿಷ್ಠಗೊಳಿಸಬೇಕು ಎಂದು ಸ್ಕೌಟ್ಸ್-ಗೈಡ್ಸ್‌ಗಳಿಗೆ ಕರೆ ನೀಡಿದರು.

ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕರೂ ಬೀದರ್‌ನ ಮುಖಂಡರಾದ ಡಾ॥ ಅಬ್ದುಲ್ ಖದೀರ್‌ರವರು ಮಾತನಾಡಿ ನಾನು ಮೆಕ್ಕಾಗೆ ಹೋಗುತ್ತಿದ್ದು, ಅಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಇಲ್ಲಿ ಸೇವೆ ಮಾಡುವುದನ್ನು ನೋಡಿದ ಬಗ್ಗೆ ತಿಳಿಸುತ್ತೇನೆಂದರು, ನೀವು ಬಲಿಷ್ಠರಾದರೆ ದೇಶ ಬಲಿಷ್ಠವಾಗುವುದು, ನಾವು-ನೀವು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಪಾಲ್ಗೊಂಡರೆ ಭಾರತ ವಿಶ್ವಮಟ್ಟದಲ್ಲಿ ರಾರಾಜಿಸುವುದು ಖಂಡಿತ ಎಂದರು.ಎಲ್ಲಾ ಮುಖಂಡರು ಸರ್ವಧರ್ಮದ ಸಾರವನ್ನು ಪ್ರತಿಪಾದಿಸಿ ಮಕ್ಕಳಿಗೆ ರಾಷ್ಟ್ರಮಟ್ಟದಲ್ಲಿ ಪರಿಚಯ ಮಾಡಬೇಕು ಎಂದು ಶುಭ ಹಾರೈಸಿದರು.

## ಸ್ವಚ್ಛತಾ ಕಾರ್ಯಕ್ರಮ

28ನೇ ರಾಜ್ಯ ಜಾಂಬೂರೇಟ್‌ನ ಕಾರ್ಯಕ್ರಮದಲ್ಲಿ ಒಂದು ಭಾಗವಾಗಿರುವ ಸ್ವಚ್ಛತಾಕಾರ್ಯದ ಬಗ್ಗೆ ಸಂದರ್ಶನ ಮಾಡಲಾಯಿತು. ತಮ್ಮ ಪರಿಶ್ರಮಕ್ಕೂ ಮೀರಿ ರೋವರ್ಸ್ ಮತ್ತು ರೇಂಜರ್ಸ್‌ಗಳು ಈ ಕಾರ್ಯದಲ್ಲಿ ತಮ್ಮನ್ನು ತಾವು

# ಸ್ಕೌಟ್-ಗೈಡ್ ಚಳವಳಿಯ ತತ್ವಗಳು ನಾಯಕತ್ವ ಗುಣ ಬೆಳೆಯಲು ಸಹಕಾರಿ

**ಶ್ರೀ ಯು.ಟಿ. ಖಾದರ್**
ಮಾನ್ಯ ಮಾಜಿ ಸಚಿವರು ಹಾಗೂ ಶಾಸಕರು



'ಮಂಗಳೂರಿನ ನೆಹರೂ ಕ್ರೀಡಾಂಗಣದಲ್ಲಿ ನಡೆಯು-ತ್ತಿದ್ದ ಗಣರಾಜ್ಯೋತ್ಸವದಲ್ಲಿ ಸಚಿವರು ಧ್ವಜಾರೋಹಣ ಮಾಡುವಾಗ ಸೇಂಟ್ ಅಲೋಸಿಸ್ ಶಾಲೆಯ ವಿದ್ಯಾರ್ಥಿ ಆಗಿದ್ದೆ. ಇದೇ ರೀತಿ ಧ್ವಜಾರೋಹಣ ಮಾಡುವ ಕನಸು ಕಂಡಿದ್ದೆ. ಈಗ ನನಸಾಯಿತು' ಎಂದು ಶಾಸಕ ಶ್ರೀ ಯು.ಟಿ ಖಾದರ್ ನೆನಪುಗಳನ್ನು ಮೆಲುಕು ಹಾಕಿದರು.

ಜಾಂಬೋರೇಟ್‌ನಲ್ಲಿ ಸಕ್ರಿಯ ಕಾರ್ಯಕರ್ತರಾಗಿ ತೊಡಗಿಸಿಕೊಂಡಿರುವ ಮಾನ್ಯ ಮಾಜಿ ಸಚಿವರೂ ಹಾಗೂ ಶಾಸಕರಾದ ಶ್ರೀ ಯು.ಟಿ.ಖಾದರ್ ನಾಯಕತ್ವ ಗುಣ ಬೆಳೆಯಲು ಸ್ಕೌಟ್ ಮತ್ತು ಗೈಡ್ ಚಳವಳಿ ಅತ್ಯಂತ ಸಹಕಾರಿ ಎಂದು ತಿಳಿಸಿದರು.

ದೊಡ್ಡಬಳ್ಳಾಪುರದ ಡಾ॥ ಅನಿಬೆಸೆಂಟ್ ಪಾರ್ಕ್‌ನಲ್ಲಿ ನಡೆಯುತ್ತಿರುವ 28ನೇ ರಾಜ್ಯ ಜಾಂಬೋರೇಟ್‌ನಲ್ಲಿ ಸಕ್ರಿಯ ಕಾರ್ಯಕರ್ತರಾಗಿ ತೊಡಗಿಸಿಕೊಂಡಿರುವ ಶ್ರೀ ಯು.ಟಿ.ಖಾದರ್, '1981ರಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ಇದ್ದಾಗ, ಆ ಸಂದರ್ಭದ ಕ್ಷಣಗಳತ್ತ ಜಾರಿದರು. 'ಅನಿಬೆಸೆಂಟ್ ಪಾರ್ಕ್‌ನಲ್ಲಿ ಏರ್ಪಡಿಸಿದ್ದ ಜಾಂಬೋರೇಟ್‌ನಲ್ಲಿ ಭಾಗವಹಿಸಿದ್ದು ನನ್ನ ಪ್ರಥಮ ಕ್ಯಾಂಪ್. ನಂತರ 1985ರಲ್ಲಿ ಬೆಂಗಳೂರಿನ ಪ್ಯಾಲೇಸ್ ಮೈದಾನದಲ್ಲಿ ನಡೆದ 10ನೇ ರಾಷ್ಟ್ರಮಟ್ಟದ ಜಾಂಬೋರಿಯಲ್ಲಿ ಶಿಬಿರಾರ್ಥಿಯಾಗಿ ಭಾಗವಹಿಸಿದ್ದೆ. 2016ರಲ್ಲಿ ಮೈಸೂರಿನಲ್ಲಿ ನಡೆದ 19ನೇ ರಾಷ್ಟ್ರೀಯ ಜಾಂಬೋರಿಯಲ್ಲಿ ಸಚಿವನಾಗಿ ಭಾಗವಹಿಸಿದ್ದು, ಮಂಗಳೂರಿನ ನೆಹರೂ ಮೈದಾನದಲ್ಲಿ ಸಚಿವನಾಗಿ ರಾಷ್ಟ್ರಧ್ವಜ ಹಾರಿಸಿದ್ದು ಇದೆಲ್ಲ ಸಾಧ್ಯವಾಗಲು ಆತ್ಮಶಕ್ತಿ ಬೆಳೆಸಿದ್ದು' ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಎಂದು ಅಭಿಮಾನದಿಂದ ಹೇಳಿದರು.

1982ರಲ್ಲಿ ನಡೆದ ಜಾಂಬೋರೇಟ್‌ಗೆ ಬಂದಿದ್ದು ಕೂಡ ರೋಚಕ ಅನುಭವ. ಮಂಗಳೂರಿನಿಂದ ಮೀಟರ್ ಗೇಜ್ ರೈಲಿನಲ್ಲಿ ಮಲಗಲು ಸ್ಥಳ ಇಲ್ಲದೆ ಹಗ್ಗ ಕಟ್ಟಿಕೊಂಡು ಮಲಗಿದ್ದು, ಜಾಂಬೋರೇಟ್‌ನ ಸಾಹಸ ಕ್ರೀಡೆಗಳಲ್ಲಿ ಭಾಗವಹಿಸಿದ್ದ ನೆನಪು ಇಂದಿಗೂ ಅಚ್ಚಹಸಿರಾಗಿದೆ. ಹೀಗಾಗಿಯೇ ಅನಿಬೆಸೆಂಟ್ ಪಾರ್ಕ್ ಕಾರ್ಯಕ್ರಮಕ್ಕೆ ಬರುವುದೆಂದರೆ ಖುಷಿ ಅನ್ನಿಸುತ್ತದೆ ಎಂದು ಹೇಳಿದರು.

---

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಲವಾರು ದಶಕಗಳಿಂದಲೂ ಅಮೂಲ್ಯವಾದ ಕೆಲಸ ಮಾಡುತ್ತಿದೆ. ನಮ್ಮ ದೇಶದ ವಿವಿಧ ಭಾಗಗಳಿಂದ ಒಂದುಗೂಡಿ ಸೇರಿದಾಗ, ವಿದೇಶಗಳಿಂದ ಬಂದು ಭಾಗವಹಿಸಿದವರೊಡನೆ ಕಲೆತಾಗ, ಪರಸ್ಪರ ಸೌಹಾರ್ದತೆ ಮತ್ತು ವಿಶ್ವಮೈತ್ರಿ ಭಾವನೆಗಳು ಸ್ಫುಟಿದು "ವಿಶ್ವಕುಟುಂಬ"ದ ಪ್ರಾಮುಖ್ಯತೆಗೆ ಒತ್ತು ನೀಡುತ್ತದೆ. **- ಡಾ॥ ಎಸ್. ರಾಧಾಕೃಷ್ಣನ್**

◆ ◆ ◆

ಸ್ಕೌಟ್ಸ್-ಗೈಡ್ಸ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಒಂದು ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ – ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು ಹಾಗೂ ನಾವು ಯೋಗ್ಯ ನಾಗರೀಕರಾಗಲು ತರಬೇತಿ ನೀಡುತ್ತದೆ.

**- ಎಸ್. ನಿಜಲಿಂಗಪ್ಪ**

◆ ◆ ◆

20ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣ ತಜ್ಞರಿಂದಲ್ಲ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ. **- ಜಾರ್ಜ್ ಬರ್ನಾಡ್ ಷಾ**

# ರಾಜ್ಯ ಸಂಸ್ಥೆಯನ್ನು ಮುನ್ನಡೆಸಿದ ಮುಖ್ಯಸ್ಥರು

## ಜಸ್ಟೀಸ್ ಕೆ. ಶಂಕರನಾರಾಯಣರಾವ್
(1929 ರಿಂದ 1943)



ಶ್ರೀಯುತರು ನ್ಯಾಯವಾದಿಯಾಗಿ, ಸರ್ಕಾರಿ ವಕೀಲರಾಗಿ, ಜಿಲ್ಲಾ ನ್ಯಾಯಾಧೀಶರಾಗಿ, ಮೈಸೂರು ಸಂಸ್ಥಾನದ ಹೈಕೋರ್ಟ್‌ನಲ್ಲಿ ಮುಖ್ಯ ನ್ಯಾಯಮೂರ್ತಿಗಳಾಗಿ ಕೆಲಸ ನಿರ್ವಹಿಸಿದರು. ಶ್ರೀಯುತರು ಮದ್ರಾಸ್‌ನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಎಂ.ಎ., ಪದವಿಯು ಭೌತಶಾಸ್ತ್ರ ವಿಷಯದಲ್ಲಿ ಪ್ರಥಮರಾಗಿ "ಆರಣಿ ಜಾಗೀರ್‌ದಾರ್ ಚಿನ್ನದ ಪದಕ" ಪಡೆದರು. ಆಗಿನ ಚೀಫ್ ಸ್ಕೌಟ್ ಆಗಿದ್ದ ಮೈಸೂರು ಸಂಸ್ಥಾನದ ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು ಇವರನ್ನು ರಾಜ್ಯದ ಪ್ರಥಮ "ಮುಖ್ಯ ಸ್ಕೌಟ್ ಆಯುಕ್ತರನ್ನಾಗಿ" 1929ರಲ್ಲಿ ನೇಮಿಸಿದರು. ರಾಜ್ಯ ಸಂಸ್ಥೆಯ ಕಾರ್ಯಾಲಯವು ಬೆಂಗಳೂರಿನ ಟಿಪ್ಪು ಸುಲ್ತಾನ್ ಅರಮನೆಯಲ್ಲಿ ಕಾರ್ಯ ಪ್ರಾರಂಭಿಸಿ, 1939–40 ರಲ್ಲಿ ಕೋಟೆ ಪ್ರದೇಶದಲ್ಲಿ ತಮ್ಮ ಸ್ವಂತ ಕಟ್ಟಡಕ್ಕೆ ಬದಲಾಯಿಸಲಾಯಿತು. ಇದಕ್ಕೆ ಇವರು ಮುಖ್ಯ ಕಾರಣರು. ಇವರಿಗೆ "ರಾಜಧರ್ಮಪ್ರಸಕ್ತ". "ರಜತ ಗಂಡಭೇರುಂಡ" ಮತ್ತು ಅಂತರ್ ರಾಷ್ಟ್ರೀಯ ಮಟ್ಟದ ಅತ್ಯುನ್ನತ ಪ್ರಶಸ್ತಿ "ಕಂಚು ತೋಳ" (Bronze Wolf) ಪ್ರಶಸ್ತಿ ನೀಡಲಾಗಿದೆ. ಶ್ರೀಯುತರು ಮೈಸೂರು ಸಂಸ್ಥಾನದ' ಮುಖ್ಯ ಸ್ಕೌಟ್ ಆಯುಕ್ತರಾಗಿದ್ದಾಗ ರಾಜ್ಯಮಟ್ಟದ ಆರು ರ್‍ಯಾಲಿಗಳನ್ನು ಸಂಘಟಿಸಲಾಯಿತು. ಶ್ರೀಯುತರು 1937 ರಲ್ಲಿ ನಡೆದ ದೇಶದ ಪ್ರಥಮ "ಅಖಿಲ ಭಾರತ ಜಾಂಬೋರಿ"ಯಲ್ಲಿ ಭಾಗವಹಿಸಿ, ಸಂಸ್ಥಾಪಕ ಬಿ.ಪಿ. ಅವರೊಡನೆ ವಿಚಾರ ವಿನಿಮಯ ನಡೆಸಿದರು. ಅವರು ಗ್ರಾಮೀಣ ಸ್ಕೌಟಿಂಗ್ ಮತ್ತು ಮುಕ್ತದಳಗಳ ಬೆಳವಣಿಗೆಗೆ ಒತ್ತು ನೀಡಿದ್ದರು. ಶ್ರೀಯುತರು ಮೈಸೂರು ಸರ್ಕಾರದ "ಜೈಲ್ ರಿಫಾರ್ಮ್ಸ್ ಕಮೀಷನ್"ನ ಕ್ರಿಯಾಶೀಲ ಸದಸ್ಯರಾಗಿದ್ದರು.

## ಮೇಜರ್ ಡಾ॥ ವೈ.ವಿ.ಕೆ. ಮೂರ್ತಿ
(1943 ರಿಂದ 1949)



ಇವರು ನಮ್ಮ ಎರಡನೆಯ "ಮುಖ್ಯ ಸ್ಕೌಟ್ ಆಯುಕ್ತರು". ಇವರು ವೈದ್ಯರಾಗಿ ವಿಶ್ವ ಮಹಾಸಮರದ ವೇಳೆ ಯೂರೋಪಿನಲ್ಲಿ ಸೇವೆ ಸಲ್ಲಿಸಿದ ಇವರು ಬೆಂಗಳೂರು ಚಾಮುಂಡಿ ಸ್ಕೌಟ್ ದಳದ ಮೂಲಕ ಸ್ಕೌಟಿಂಗ್ ಪ್ರವೇಶಿಸಿದರು. ಸಹಾಯಕ ಮತ್ತು ಜಿಲ್ಲಾ ಆಯುಕ್ತರಾಗಿ, ರಾಜ್ಯ ಮಟ್ಟದಲ್ಲಿ ಉಪ ಮುಖ್ಯ ಸ್ಕೌಟ್ ಆಯುಕ್ತರಾಗಿ ರಾಜ್ಯದ ಎರಡನೆಯ ಮುಖ್ಯ ಸ್ಕೌಟ್ ಆಯುಕ್ತರಾದರು. ಸೆಂಟ್ ಜಾನ್ ಆಂಬುಲೆನ್ಸ್ ಅಸೋಸಿಯೇಷನ್, ಕರ್ನಾಟಕದ ಸಂಸ್ಥಾಪಕ ಸದಸ್ಯರೂ, ರಾಜ್ಯ ಶಾಖೆಯ ಕೋಶಾಧಿಕಾರಿ ಆಗಿದ್ದರು. ಮೈಸೂರು

(ಕರ್ನಾಟಕ)ರಾಜ್ಯ ಕ್ರಿಕೆಟ್ ಅಸೋಸಿಯೇಷನ್‌ನ ಸಂಸ್ಥಾಪಕರಲ್ಲೊಬ್ಬರು. ವೈದ್ಯಕೀಯ, ಸ್ಕೌಟಿಂಗ್, ಶೈಕ್ಷಣಿಕ, ಧಾರ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲೂ ಇವರು ಸಕ್ರಿಯ ಪಾತ್ರ ವಹಿಸಿದ್ದರು. ದೊಡ್ಡಬಳ್ಳಾಪುರದ ರಾಜ್ಯ ತರಬೇತಿ ಕೇಂದ್ರ (ಈಗಿನ ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರ)ದ ಸ್ಥಾಪನೆಗೆ ಮೂಲ ಕಾರಣಕರ್ತರಲ್ಲಿ ಇವರೂ ಒಬ್ಬರು. "ರಜತ ಗಂಡಭೇರುಂಢ" ಪ್ರಶಸ್ತಿ ಪಡೆದಿದ್ದರು. ಸಂಯುಕ್ತ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಾಪನೆಗೆ ಶ್ರಮಿಸಿದರು.

### ಪ್ರೊಫೆಸರ್ ಪಿ. ಶಿವಶಂಕರ್
### (1949-1953 ಮತ್ತು 1960-1964)



ಶ್ರೀಯುತರು ನ್ಯಾಯವಾದಿಯಾಗಿ ಕೆಲಸ ನಿರ್ವಹಿಸಿದರು. ಮೂರನೆಯ "ಮುಖ್ಯ ಸ್ಕೌಟ್ ಆಯುಕ್ತರಾಗಿ" 1949ರಲ್ಲಿ ನಿಯೋಜಿತರಾದರು. ಕಾಲೇಜು ದಿನಗಳಲ್ಲಿ ರೋವರ್ ಆಗಿದ್ದವರು. ಸ್ಕೌಟ್ ಸಂಸ್ಥೆಗಳು 1951 ರಲ್ಲಿ ವಿಲೀನದ ನಂತರ 1953 ರಲ್ಲಿ ಚುನಾವಣೆ ನಡೆಯುವವರೆಗೆ ರಾಜ್ಯ ಮುಖ್ಯ ಆಯುಕ್ತರಾಗಿ ಮುಂದುವರೆದರು ನಂತರ ಚುನಾಯಿತ ರಾಜ್ಯ ಮುಖ್ಯ ಆಯುಕ್ತರಾದರು. ರಾಷ್ಟ್ರ ಮಟ್ಟದಲ್ಲಿ ಮುಖ್ಯ ಆಯುಕ್ತ (ಸ್ಕೌಟ್ಸ್) ಆಗಿ ಸೇವೆ ಸಲ್ಲಿಸಿದರು. ಇವರಿಗೆ "ರಜತ ಗಂಡಭೇರುಂಡ" ಮತ್ತು ಅತ್ಯುನ್ನತ ರಾಷ್ಟ್ರೀಯ ಪ್ರಶಸ್ತಿ "ಬೆಳ್ಳಿ ಆನೆ" ಪ್ರಶಸ್ತಿ ದೊರಕಿದೆ. ಶ್ರೀ ಶಿವಶಂಕರ್ ರವರು ಸ್ಕೌಟ್-ಗೈಡ್ ಚಳವಳಿಯ ವಿವಿಧ ಸಂಘಟನೆಗಳನ್ನು ವಿಲೀನಗೊಳಿಸುವ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿ, 1950ರಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಎಂಬ ಏಕೈಕ ಸಂಸ್ಥೆ ಸ್ಥಾಪಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಶ್ರೀಯುತರು ಹಂಗೇರಿಯಲ್ಲಿ, ಫ್ರಾನ್ಸ್‌ನಲ್ಲಿ ಮತ್ತು ಮೆಕ್ಸಿಕೋನಲ್ಲಿ ನಡೆದ ಅಂತರ ರಾಷ್ಟ್ರೀಯ ಜಾಂಬೋರಿಗಳಲ್ಲಿ ಭಾಗವಹಿಸಿದ್ದರು. ಹಲವಾರು ಅಂತರರಾಷ್ಟ್ರೀಯ ಮಟ್ಟದ ಸಭೆ ಸಮಾವೇಶಗಳಲ್ಲಿ ಭಾಗವಹಿಸಿದ್ದರು. 1960ರಲ್ಲಿ ಬೆಂಗಳೂರಿನಲ್ಲಿ ನಡೆದ 3ನೆಯ ರಾಷ್ಟ್ರೀಯ ಜಾಂಬೋರಿಯಲ್ಲಿ ಗೈಡ್ ಸಂಸ್ಥೆಯ ವಿಶ್ವ ಮುಖ್ಯಸ್ಥೆ "ಲೇಡಿ ಬೇಡನ್ ಪೊವೆಲ್" ರವರು, ರಾಷ್ಟ್ರೀಯ ಸ್ಕೌಟ್ ಆಯುಕ್ತ ಪಂಡಿತ್ ಹೃದಯನಾಥ ಕುಂಜ್ರು, ಮೈಸೂರಿನ ರಾಜಪ್ರಮುಖರಾದ ಶ್ರೀ ಜಯಚಾಮರಾಜ ಒಡೆಯರ್ ಮತ್ತು ಹಲವಾರು ರಾಷ್ಟ್ರೀಯ ನಾಯಕರುಗಳು ಭಾಗವಹಿಸಿದ್ದರು.

### ಜೆ.ಬಿ. ಮಲ್ಲಾರಾಧ್ಯ
### (1953 ರಿಂದ 1960)



ಐ.ಎ.ಎಸ್. ಅಧಿಕಾರಿಯಾಗಿದ್ದ ಶ್ರೀಯುತರು ನಮ್ಮ ನಾಲ್ಕನೆಯ ರಾಜ್ಯ ಮುಖ್ಯ ಆಯುಕ್ತರು. ತಮ್ಮ ಕಾಲೇಜು ದಿನಗಳಲ್ಲಿ ರೋವರ್ ಆಗಿದ್ದವರು. ಶ್ರೀಯುತರು ಪ್ರಥಮ ಚುನಾಯಿತ "ರಾಜ್ಯ ಮುಖ್ಯ ಆಯುಕ್ತರು". ಶ್ರೀಯುತರು ಸರ್ಕಾರಿ ಕೆಲಸದಲ್ಲಿದ್ದು, ಅನೇಕ ರಚನಾತ್ಮಕ ಕಾರ್ಯಗಳನ್ನು ಸಾಧಿಸಿದರು. "ಮೈಸೂರು ಚೇಂಬರ್ ಆಫ್ ಕಾಮರ್ಸ್"ನ ಕಾರ್ಯನಿರ್ವಾಹಕ ಮಂಡಲಿಯಲ್ಲಿದ್ದು, ಹಲವಾರು ವರ್ತಕರ ಸಮ್ಮೇಳನಗಳನ್ನು ಯಶಸ್ವಿಯಾಗಿ ಸಂಘಟಿಸಿದರು. ಹಲವಾರು ಸಮಾಜಸೇವಾ ಶ್ರಮದಾನ ಶಿಬಿರಗಳನ್ನು ನಡೆಸಿದರು. ಇವರಿಗೆ "ರಜತ ಗಂಡಭೇರುಂಢ" ಪ್ರಶಸ್ತಿ ದೊರಕಿದೆ. ಇಂದಿನ "ಕಂಠೀರವ ಕ್ರೀಡಾಂಗಣದ" ನಿರ್ಮಾಣಕ್ಕೆ ಕಾರಣರಾದರು.

ಶ್ರೀಯುತರು ರೂಪಿಸಿದ ತಾಂತ್ರಿಕ ಶಿಕ್ಷಣ ಪದ್ಧತಿಯ ರೂಪುರೇಷೆ ಇಡೀ ಭಾರತಕ್ಕೇ ಮಾದರಿ ಎನಿಸಿತು. ಶ್ರೀಯುತರು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಕೈಗಾರಿಕೆ, ವಾಣಿಜ್ಯ, ಜವಳಿ

ಇಲಾಖೆಗಳ ನಿರ್ದೇಶಕರಾಗಿ, ಕರ್ನಾಟಕ ಪ್ರವಾಸೋದ್ಯಮ ನಿಗಮದ ಅಧ್ಯಕ್ಷರಾಗಿ, ಮೈಸೂರು, ಆಂಧ್ರ, ಮದ್ರಾಸ್, ಮುಂಬೈ ರಾಜ್ಯಗಳ ಮಲೆನಾಡು ಅಭಿವೃದ್ಧಿ ಸಮಿತಿಗಳ ಕಾರ್ಯದರ್ಶಿ -ಯಾಗಿ, ಪ್ರಥಮ ಪಂಚವಾರ್ಷಿಕ ಸಮಿತಿಯ ಯೋಜನಾ ಸದಸ್ಯರಾಗಿ ಮಹತ್ತರವಾದ ಕೊಡುಗೆಯನ್ನು ನೀಡಿದ್ದಾರೆ. 1956ರಲ್ಲಿ ತುಮಕೂರಿನಲ್ಲಿ ನಡೆದ 10ನೆಯ ರಾಜ್ಯ ಜಾಂಬೋರಿಯಲ್ಲಿ "ಮುಕ್ತದಳ" ಸ್ಕೌಟರುಗಳ ರಾಜ್ಯಮಟ್ಟದ ಪ್ರಥಮ ಸಮ್ಮೇಳನ ಜರುಗಿತು.

ಶ್ರೀಯುತರು ಮೈಸೂರು ಮಹಾರಾಜರ ಹುಜೂರ್ ಸೆಕ್ರೆಟರಿ ಆಗಿ ಕಾರ್ಯನಿರ್ವಹಿಸಿದರು. ಇವರು ರಾಜ್ಯ ಶಿಕ್ಷಣ ಇಲಾಖೆಯ ನಿರ್ದೇಶಕರಾಗಿದ್ದಾಗ ಗ್ರಾಮೀಣ ಪ್ರದೇಶಗಳಲ್ಲಿ ಸ್ಕೌಟಿಂಗ್ ಬೆಳವಣಿಗೆಗಾಗಿ ಆಗಿನ ಪಟೇಲರು ಮತ್ತು ಶಾನುಬೋಗರಿಗೆ ಸ್ಕೌಟ್ ಶಿಕ್ಷಣ ನೀಡಲು ಆದೇಶಿಸಿದ್ದರು. ಅಖಿಲ ಭಾರತ ಕ್ರೀಡಾ ಮಂಡಲಿಯ ಅಧ್ಯಕ್ಷರಾಗಿದ್ದ ಇವರು, ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರೂ ಆಗಿ ರಚನಾತ್ಮಕ ಕಾರ್ಯನಿರ್ವಹಿಸಿದ್ದಾರೆ.

### ಕೊಂಡಜ್ಜಿ ಬಸಪ್ಪ
### (1964 ರಿಂದ 1982)



"ಕೊಂಡಜ್ಜಿ" ಎಂದೇ ಪ್ರಖ್ಯಾತರಾಗಿದ್ದ ಕೊಂಡಜ್ಜಿ ಬಸಪ್ಪನವರು ನಮ್ಮ ರಾಜ್ಯದ ಐದನೆಯ ಮುಖ್ಯ ಆಯುಕ್ತರು. ವಕೀಲರಾಗಿದ್ದ ಶ್ರೀಯುತರು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಲ್ಲಿ ಮಂತ್ರಿಯಾಗಿ ಕಾರ್ಯ ನಿರ್ವಹಿಸಿದ್ದರು. ಇವರ ಅವಧಿಯಲ್ಲಿ ಏಳು ರಾಜ್ಯ ಜಾಂಬೋರೇಟ್‌ಗಳು ಸಂಘಟಿತವಾಗಿದ್ದು, ಮತ್ತು ಅನೇಕ ರಾಷ್ಟ್ರೀಯ ಸಮಾವೇಶಗಳು ರಾಜ್ಯದಲ್ಲಿ ನಡೆದದ್ದು ಇತಿಹಾಸ. ಶ್ರೀಯುತರು ಹಲವಾರು ಅಂತರರಾಷ್ಟ್ರೀಯ ವಿಶ್ವ ಸ್ಕೌಟ್ ಸಮ್ಮೇಳನಗಳಲ್ಲಿ ಮತ್ತು ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದ್ದರು. 1976ರಲ್ಲಿ ಅವರ 60ನೇ ಹುಟ್ಟು ಹಬ್ಬದ "ಅಭಿನಂದನಾ ಸಮಾರಂಭ"ದಲ್ಲಿ ಅವರಿಗೆ ನೀಡಿದ ಒಂದು ಲಕ್ಷ ರೂಗಳನ್ನು ಸ್ಕೌಟ್ ಸಂಸ್ಥೆಗೆ ಅರ್ಪಿಸಿದರು. ಅತ್ಯುನ್ನತ ರಾಷ್ಟ್ರೀಯ ಪ್ರಶಸ್ತಿ "ಬೆಳ್ಳಿ ಆನೆ" ಮತ್ತು ಕರ್ನಾಟಕ ಸರ್ಕಾರದ "ರಾಜ್ಯೋತ್ಸವ ಪ್ರಶಸ್ತಿಗಳನ್ನು" ನೀಡಿ ಗೌರವಿಸಲಾಗಿದೆ. ಚಿತ್ರದುರ್ಗ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿ ಉತ್ತಮ ಕೆಲಸ ಮಾಡಿದರು. ಅವರು ಸಲ್ಲಿಸಿದ ಸಾರ್ವಜನಿಕ ಸೇವೆಯನ್ನು ಗುರುತಿಸಿ ಮೈಸೂರು ಮಹಾರಾಜರು 1946 ರಲ್ಲಿ "ಸ್ವರ್ಣ ಸೇವಾ ಪದಕ" ವನ್ನು ನೀಡಿ ಗೌರವಿಸಿದರು. ಮೈಸೂರು ವಿಶ್ವವಿದ್ಯಾಲಯ ಆಡಳಿತ ಮಂಡಳಿ, ಬೆಂಗಳೂರು ವ್ಯವಸಾಯ ವಿಶ್ವವಿದ್ಯಾಲಯ ಆಡಳಿತ ಮಂಡಳಿ ಸದಸ್ಯರಾಗಿದ್ದರು. ರಾಜ್ಯ ಕೈಮಗ್ಗ ಸಲಹಾ ಮಂಡಳಿ, ರಾಜ್ಯ ಉಗ್ರಾಣ ಸಂಸ್ಥೆ, ಭಾರತ್ ಸೇವಕ ಸಮಾಜ, ಪಂಚಾಯಿತಿ ರಾಜ್ಯ ಅಧ್ಯಯನ ಸಮಿತಿ, ಕುರಿ ಮತ್ತು ಉಣ್ಣೆ ಅಧ್ಯಯನ ಸಮಿತಿಗಳ ಅಧ್ಯಕ್ಷರಾಗಿದ್ದರು. ಶ್ರೀಯುತರ ಸತತ ಪರಿಶ್ರಮದಿಂದ ಅವರ ಜನ್ಮ ಸ್ಥಳ ಕೊಂಡಜ್ಜಿ ಗ್ರಾಮದ ಬಳಿ 80 ಎಕರೆ ಪ್ರದೇಶದಲ್ಲಿ 1970ರಿಂದ ರಾಜ್ಯಮಟ್ಟದ ಸ್ಕೌಟ್-ಗೈಡ್ ತರಬೇತಿ ಕೇಂದ್ರ ಸ್ಥಾಪಿಸಿದ್ದು, ರಾಜ್ಯದ ಹೆಮ್ಮೆಯ ತರಬೇತಿ ಕೇಂದ್ರವಾಗಿ ಅಭಿವೃದ್ಧಿ ಹೊಂದಿದೆ. ಅವರ ನಿಧನದ ನಂತರ ತರಬೇತಿ ಕೇಂದ್ರವನ್ನು "ಕೊಂಡಜ್ಜಿ ಬಸಪ್ಪ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ" ಎಂದು ಮರುನಾಮಕರಣ ಮಾಡಲಾಗಿದೆ.

### ವಿ.ಪಿ. ದೀನದಯಾಳು ನಾಯ್ಡು
### (1983 ರಿಂದ 1993)

ಶ್ರೀಯುತರು ನಮ್ಮ ರಾಜ್ಯದ ಆರನೆಯ ಮುಖ್ಯ ಆಯುಕ್ತರು. ವಕೀಲರಾಗಿದ್ದ ಶ್ರೀಯುತರು ಕಾಲೇಜು ದಿನಗಳಲ್ಲಿಯೇ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದವರು. ಬೆಂಗಳೂರು ನಗರ "ಮೇಯರ್" ಆಗಿ, ಸಿಟಿ ಇಂಪ್ರೋವ್‌ಮೆಂಟ್ ಟ್ರಸ್ಟ್ ಬೋರ್ಡ್‌ನ ಅಧ್ಯಕ್ಷರಾಗಿ ಬೆಂಗಳೂರು ನಗರಕ್ಕೆ ಉತ್ತಮ ಸೇವೆ ಸಲ್ಲಿಸಿದವರು. ಕರ್ನಾಟಕದ ವಿಧಾನ ಸಭೆಯ ಮತ್ತು ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿದವರು. ಕಾಲೇಜು ದಿನಗಳಲ್ಲಿ ರೋವರ್ ಆಗಿದ್ದವರು. ಉತ್ತಮ ಕ್ರೀಡಾಪಟುವಾಗಿ, ಕರ್ನಾಟಕ ರಾಜ್ಯ ಈಜುಗಾರಿಕೆ ಸಂಸ್ಥೆ, ಕರ್ನಾಟಕ ಹಾಕಿ ಸಂಸ್ಥೆ, ಇಂಡಿಯನ್ ಜಂಖಾನಗಳ ಅಧ್ಯಕ್ಷರಾಗಿದ್ದರು. ಕರ್ನಾಟಕ ಒಲಂಪಿಕ್ ಅಸೋಸಿಯೇಷನ್ನಿನ ಉಪಾಧ್ಯಕ್ಷರಾಗಿದ್ದರು.





ಕರ್ನಾಟಕ ರಾಜ್ಯ ಚೈಲ್ಡ್ ವೆಲ್‌ಫೇರ್ ಕೌನ್ಸಿಲ್‌ನ ಸಂಸ್ಥಾಪಕರ ಸದಸ್ಯರಾಗಿ 30 ವರ್ಷ ಸೇವೆ ಸಲ್ಲಿಸಿದರು. ಇವರ ಅವಧಿಯಲ್ಲಿ ನಾಲ್ಕು ರಾಜ್ಯ ಜಾಂಬೋರಿಗಳು ಮತ್ತು ಹಲವಾರು ರಾಷ್ಟ್ರೀಯ ಸಮಾವೇಶಗಳು ನಡೆದವು. ಹಲವಾರು ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ ಭಾಗವಹಿಸಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್‌ನ ರಾಷ್ಟ್ರೀಯ ಆಯುಕ್ತರಾಗಿ ಸಹ ಕೆಲಸ ನಿರ್ವಹಿಸಿದರು. ಅತ್ಯುನ್ನತ ರಾಷ್ಟ್ರೀಯ ಪ್ರಶಸ್ತಿ "ಬೆಳ್ಳಿ ಆನೆ" ಗೌರವವನ್ನು ನೀಡಲಾಗಿದೆ. 1985-87 ರ ಅವಧಿಯಲ್ಲಿ ರಾಷ್ಟ್ರಮಟ್ಟದಲ್ಲಿ ಡೆಪ್ಯೂಟಿ ಚೀಫ್ ಕಮೀಷನರ್ (ಸ್ಕೌಟ್ಸ್), 1987-89 ರಲ್ಲಿ ಚೀಫ್ ಕಮೀಷನರ್ ಸ್ಕೌಟ್ಸ್ ಆಗಿ, 199, ರಿಂದ ಪ್ರಭಾರಿ ರಾಷ್ಟ್ರೀಯ ಆಯುಕ್ತರಾಗಿ, ಮುಂದೆ 1993-95 ರ ಅವಧಿಯಲ್ಲಿ ಅತ್ಯುನ್ನತ ಪದವಿ "ರಾಷ್ಟ್ರೀಯ ಆಯುಕ್ತ"ರ ಹುದ್ದೆಯನ್ನು ಅಲಂಕರಿಸಿದರು. ಕರ್ನಾಟಕದಿಂದ ರಾಷ್ಟ್ರೀಯ ಆಯುಕ್ತರಾಗಿ ಸೇವೆ ಸಲ್ಲಿಸುವ ಅವಕಾಶ ಪಡೆದ ಮೊದಲಿಗರು.

### ಕೊಂಡಜ್ಜಿ ಬ. ಷಣ್ಮುಖಪ್ಪ
### (1993 ರಿಂದ 2014)

ಶ್ರೀಯುತರು ನಮ್ಮ ರಾಜ್ಯದ ಏಳನೆಯ ರಾಜ್ಯ ಮುಖ್ಯ ಆಯುಕ್ತರು. ವಾಣಿಜ್ಯ ಮತ್ತು ನ್ಯಾಯಶಾಸ್ತ್ರ ಪದವೀಧರರಾದ ಇವರು ಕರ್ನಾಟಕ ಅಪೆಕ್ಸ್ ಬ್ಯಾಂಕಿನಲ್ಲಿ ಮುಖ್ಯ ಪ್ರಧಾನ ವ್ಯವಸ್ಥಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ವಾಣಿಜ್ಯ ಪದವೀಧರ ಸಂಘದ ಕಾರ್ಯದರ್ಶಿ. ಬೆಂಗಳೂರು ವಿಶ್ವವಿದ್ಯಾಲಯ ಸೆನೆಟ್, ಹಣಕಾಸು ಮತ್ತು ಗ್ರಂಥಾಲಯ ಸಮಿತಿಗಳ ಸದಸ್ಯರಾಗಿ, ಭಾರತೀಯ ರೆಡ್‌ಕ್ರಾಸ್ ಸಂಸ್ಥೆಯ ಕರ್ನಾಟಕದ ಕೋಶಾಧಿಕಾರಿ. ಕರ್ನಾಟಕ ರಾಜ್ಯ ಅಂಧರ ಕಲ್ಯಾಣ ಸಂಸ್ಥೆಯ ಅಧ್ಯಕ್ಷರಾಗಿ, ಭಾರತೀಯ ಸಾಮಾಜಿಕ ಆರ್ಥಿಕ ಅಧ್ಯಯನ ಸಂಸ್ಥೆಯ ಕಾರ್ಯದರ್ಶಿಯಾಗಿ, ಹೀಗೆ ಹಲವಾರು ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸಿದ್ದಾರೆ. ಇವರ ಅವಧಿಯಲ್ಲಿ ಆರು ರಾಜ್ಯ ಜಾಂಬೋರಿಗಳು ಮತ್ತು ಹಲವಾರು ರಾಷ್ಟ್ರೀಯ ಅಂತರರಾಷ್ಟ್ರೀಯ ಸಮಾವೇಶಗಳು ನಡೆದವು. ಅತ್ಯುನ್ನತ ರಾಷ್ಟ್ರೀಯ ಪ್ರಶಸ್ತಿ "ಬೆಳ್ಳಿ ಆನೆ" ಮತ್ತು ಕರ್ನಾಟಕ ಸರ್ಕಾರದ "ರಾಜ್ಯೋತ್ಸವ ಪ್ರಶಸ್ತಿ" ನೀಡಿ ಗೌರವಿಸಲಾಗಿದೆ. ಇವರ ಅಭಿನಂದನಾ ಸಮಾರಂಭದಲ್ಲಿ 1997ರಲ್ಲಿ ಇವರಿಗೆ ನೀಡಿದ ರೂ. 3.65 ಲಕ್ಷ ನಿಧಿಯನ್ನು ಹಾಗೂ 2013ರಲ್ಲಿ ರಾಜ್ಯೋತ್ಸವ ಪ್ರಶಸ್ತಿಯ ಗೌರವಧನ ರೂ. 1 ಲಕ್ಷ ರೂಗಳನ್ನು ಸ್ಕೌಟ್ ಸಂಸ್ಥೆಯ ಕಾರ್ಯಕ್ರಮಗಳಿಗೆ ವಿನಿಯೋಗಿಸಲು ನೀಡಿದ್ದಾರೆ. 1984ರಲ್ಲಿ ನ್ಯೂಜಿಲೆಂಡ್‌ನಲ್ಲಿ ಮತ್ತು 1995ರಲ್ಲಿ ಸಿಂಗಪೂರ್‌ನಲ್ಲಿ ನಡೆದ ಏಷ್ಯಾ ಪೆಸಿಫಿಕ್ ರೀಜನಲ್ ಸಮಾವೇಶಗಳಲ್ಲಿ ಭಾಗವಹಿಸಿದ್ದರು. 2003ರಲ್ಲಿ ಥೈಲಾಂಡ್‌ನ ಚೋನ್‌ಬುರಿಯಲ್ಲಿ ನಡೆದ ಅಂತರ್‌ರಾಷ್ಟ್ರೀಯ ಜಾಂಬೋರಿಯಲ್ಲಿ ಭಾರತದ ಉಪನಾಯಕರಾಗಿ ಭಾಗವಹಿಸಿದ್ದರು. ಇವರು ಇಂಡಿಯನ್ ರೆಡ್‌ಕ್ರಾಸ್ ಸಂಸ್ಥೆ-ಕರ್ನಾಟಕ ಶಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ 1988ರಲ್ಲಿ ರಾಷ್ಟ್ರಪತಿ ಭವನದಲ್ಲಿ "Certificate of Merit" ಪ್ರಶಸ್ತಿಯ ಗೌರವ ನೀಡಲಾಗಿದೆ. ಪ್ರಸ್ತುತ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಉಪಾಧ್ಯಕ್ಷರಾಗಿದ್ದಾರೆ.

◆



# ಪರಿಸರ – ಆಪತ್ತು – ಪರಿಹಾರ

◆ ಗೊ.ರು. ಚನ್ನಬಸಪ್ಪ
ಅಧ್ಯಕ್ಷರು, ಪ್ರಕಟಣೆಗಳ ಸಮಿತಿ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಜೀವಿಗಳ ಜಗತ್ತು, ಭೂಗ್ರಹ, ಸೃಷ್ಟಿಯ ಕೌತುಕದ ನೆಲೆಯಾದ ಈ ಜಗತ್ತಿನ ಸೌಂದರ್ಯ ಸಂಪತ್ತಾದ ಈ ಭೂಗ್ರಹದ ಇಂದಿನ ಪರಿಸ್ಥಿತಿ ಕುರಿತು ಹಸಿರಿನ ಹರಿಕಾರ ಎಂದು ಹೆಸರಾಗಿರುವ ಸುಂದರಲಾಲ್ ಬಹುಗುಣ ಒಂದು ಗಂಭೀರವಾದ ಮಾತು ಹೇಳಿದ್ದಾರೆ.

"ನಿಸರ್ಗದ ತೊಟ್ಟಿಲಲ್ಲಿ ದೇವರು ಮಾನವನನ್ನು ಸೃಷ್ಟಿಸಿದ. ಆದರೆ ಈ ಮಾನವ ತಾನಿದ್ದ ತೊಟ್ಟಿಲನ್ನೇ ಚಿಂದಿಚಿಂದಿ ಮಾಡಿದ. ಉಣಬಡಿಸ ಬಂದ ಪ್ರಕೃತಿ ಮಾತೆಯ ಶೀಲಭಂಗ ಮಾಡಿ, ರಾಡಿ ಮಾಲಿನ್ಯದ ರಕ್ಕಸನನ್ನು ಸೃಷ್ಟಿಸಿದ. ಇದುವರೆಗೆ ಆಹಾರ, ಬಟ್ಟೆ ಮತ್ತು ವಸತಿ ಈ ಮೂರು ಮಾನವನ ಮೂಲಭೂತ ಅಗತ್ಯಗಳಾಗಿದ್ದವು. ಆದರೆ ಈಗ ಇವಕ್ಕೆಲ್ಲ ಮೂಲಾಧಾರವಾಗಿದ್ದ ನೀರು ಮತ್ತು ಗಾಳಿಗೇ ಅಭಾವ ಉಂಟಾಗಿದೆ."

ನಿಜ ಮಾನವ ಕಾಲಿಟ್ಟ ಭೂಮಿ ಮೊದಲಿನಂತಿಲ್ಲ. ಗೊತ್ತು ಗುರಿಯಿಲ್ಲದೆ ತನ್ನ ಸಂತಾನವನ್ನು ಬೆಳೆಸಿದ್ದಾನೆ. ಬೆಳೆಸುತ್ತಲೂ ಇದ್ದಾನೆ. ತನ್ನ ಉಳಿವಿಗಾಗಿ ಈ ಭೂಗ್ರಹದ ಉಳಿದ ಜೀವರಾಶಿಗಳನ್ನೆಲ್ಲ ಬಲಿ ತೆಗೆದುಕೊಳ್ಳುತ್ತಿದ್ದಾನೆ. ನಿಸರ್ಗದತ್ತ ಸೌಂದರ್ಯಕ್ಕೆ ಬೆಂಕಿ ಹಚ್ಚಿ ಆ ಬಿಸಿಯ ಝಳಕ್ಕೆ ತಾನೇ ಸೊರಗಿ ಹೋಗುತ್ತಿದ್ದಾನೆ.

ತನ್ನ ಬದುಕಿನ ಅವಸರದಲ್ಲಿ ಮೈಮರೆತಿದ್ದ ಮಾನವ ಜಾಗೃತಗೊಂಡ ಸಂಕೇತ 1927ರ ಜೂನ್ 8 ರಂದು ಸ್ಟಾಕ್ ಹೋಂನಲ್ಲಿ ನಡೆದ ವಿಶ್ವ ಸಂಸ್ಥೆಯ ಮಾನವ ಪರಿಸರ ಸಮ್ಮೇಳನ. "ಜಾಗತಿಕ ಪರಿಸರ ಮಾಲಿನ್ಯ, ಸಂಪನ್ಮೂಲ ಮತ್ತು ಜನಸ್ವಾಸ್ಥ್ಯ ಸಮಸ್ಯೆ"ಗಳನ್ನು ಎದುರಿಸಲು ಆ ಸಮ್ಮೇಳನದಲ್ಲಿ ಕಾರ್ಯಸೂತ್ರವೊಂದನ್ನು ರೂಪಿಸಲಾಯಿತು. ಈ ಉದ್ದೇಶಕ್ಕಾಗಿ ರಾಷ್ಟ್ರ ಸರಕಾರಗಳ ಗಮನ ಸೆಳೆಯಲಿಕ್ಕಾಗಿಯೇ 'ವಿಶ್ವ ಪರಿಸರ ಯೋಜನೆ' ಎಂಬ ಉಪಸಂಸ್ಥೆ ಸೃಷ್ಟಿಯಾಯಿತು. ಪರಿಸರ ಪ್ರಜ್ಞೆಯನ್ನು ಸದಾ ಜಾಗೃತವಾಗಿಡುವ ಒಂದು ಹೆಜ್ಜೆ ಪ್ರತಿವರ್ಷ ಜೂನ್ 8 ರಂದು ಆಚರಿಸಲಾಗುತ್ತಿರುವ "ವಿಶ್ವ ಪರಿಸರ ದಿನ".

ನಾವು ಪರಿಸರ, ಎನ್ನುವುದು–ಮಾನವ, ಪಶು–ಪಕ್ಷಿ, ಗಿಡ–ಮರ ಮತ್ತಿತರ ಜೀವಿಗಳು ಬದುಕಿ ಬಾಳಲು ಅವಶ್ಯಕವಾದ ಭೌತಿಕ ಹಾಗೂ ಜೈವಿಕ ವ್ಯವಸ್ಥೆಗೆ. ಈ ಜೀವಿಗಳೇ ಅಲ್ಲದೆ ನೀರು, ಗಾಳಿ, ಮಣ್ಣು, ಕಲ್ಲು ಖನಿಜ ಮತ್ತು ಹವಾಮಾನವೂ 'ಪರಿಸರ' ಶಬ್ದದ ವ್ಯಾಪ್ತಿಗೆ ಬರುತ್ತದೆ.

ಪರಿಸರ ಮಲಿನಗೊಂಡರೆ ಜೀವಿಯ ಬದುಕು ದುರ್ಭರ ವಾಗುತ್ತದೆ. ಎಲ್ಲ ಜೀವಿಗಳಿಗೂ ಮುಕುಟ ಪ್ರಾಯವಾಗಿರುವ ಮಾನವನ ಪರಿಸರದ ಗತಿ ಇಂದು ಏನಾಗಿದೆ? ಅವನ ಪರಿಸರದ ಮೂರು ಮುಖ್ಯ ಅಂಶಗಳೆಂದರೆ ನೆಲ, ಜಲ ಮತ್ತು ಅನಿಲ.

ನಮ್ಮನ್ನು ಹೊತ್ತು ನಮ್ಮ ಬದುಕಿಗೆ ಅನ್ನಕೊಡುವ ನೆಲ ಈಗ ಮಲಿನವಾಗಿದೆ. ನೆಲ ಮಾಲಿನ್ಯದ ಭೀಕರ ಪರಿಣಾಮದ ಬಗ್ಗೆ ನಾವು ಉದಾಸೀನ ತಾಳಿದ್ದೇವೆ. ನೆಲದಲ್ಲಿ ಮಹತ್ವ ಪೂರ್ಣವಾದುದೆಂದರೆ ಅದರ ಮೇಲ್ಮಣ್ಣು.

ನಮಗೆ ಬೇಕಾದ ಆಹಾರ ಧಾನ್ಯಗಳನ್ನು ಬೆಳೆದುಕೊಡಲು ಈ ಮೇಲ್ಮಣ್ಣು ಅತ್ಯಂತ ಮುಖ್ಯವಾದುದು. ಆದರೆ ಪ್ರಸ್ತುತ, ಮಳೆಯ ನೀರು ನೀರಾವರಿ, ನೆರೆ ಹಾವಳಿ ಮೊದಲಾದವುಗಳ ಪರಿಣಾಮವಾಗಿ ಒಂದು ವರ್ಷಕ್ಕೆ 6 ಸೆಂ.ಮೀ.ನಷ್ಟು ಮೇಲ್ಮಣ್ಣು ನಷ್ಟವಾಗುತ್ತಿದೆ. ಈ ನಷ್ಟದಿಂದ ಬೆಳೆಗೆ ಬೇಕಾದ ಜೈವಿಕ ಅಂಶಗಳ ಕೊರತೆಯುಂಟಾಗಿ ಉತ್ಪಾದನೆಗೆ ಭಾರೀ ಧಕ್ಕೆ ಒದಗುತ್ತಿದೆ.

ಮಳೆಯಿಂದ ಕೊಚ್ಚಿ ಹೋಗುವ ಮೇಲ್ಮಣ್ಣು ಜಲಾಶಯ. ಕೊಳ, ನದಿ ಮೊದಲಾದವುಗಳ ತಳಸೇರಿ ಅವುಗಳ ಜಲ ಸಂಗ್ರಹಣೆಯ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತಿದೆ. ನದಿಗಳ ಹೂಳುಗಳು ಪ್ರವಾಹಕ್ಕೆ ಕಾರಣವಾಗುತ್ತಿವೆ.

ನೆಲದ ಸವಕಳಿಯಿಂದ ಆಗುವ ನಷ್ಟವನ್ನು ತಪ್ಪಿಸದಿದ್ದರೆ ಮಾನವ ಮುಂದೆ ತೆರಬೇಕಾದ ದಂಡ ಅಷ್ಟಿಷ್ಟಲ್ಲ. ಆದ್ದರಿಂದ ಯೋಜಿತ ಕೃಷಿ ಪದ್ಧತಿ, ಜೀವಜನ್ಯ ಗೊಬ್ಬರಗಳ ಬಳಕೆ, ಮುಂದಾಲೋಚನೆಯ ನೀರಾವರಿ ಇವುಗಳ ಕಡೆ ಗಮನ ಕೊಡಬೇಕು. ಹಾಗೆ ಗಮನ ಕೊಟ್ಟರೆ ಮಾತ್ರ ಮಣ್ಣಿನ ಸಾರಸಂರಕ್ಷಣೆ, ಹೆಚ್ಚು ಬೆಳೆ, ಹೆಚ್ಚು ಫಲ!

ಮಾನವನ ಪ್ರಾಥಮಿಕ ಅಗತ್ಯಗಳಲ್ಲಿ ನೀರಿನ ಸ್ಥಾನ ಗಮನಾರ್ಹವಾದುದು. ನೀರು ಭೂ ತಾಯಿಯ ಎದೆ ಹಾಲು. ಅದು ವಿಷವಾದರೆ ಗತಿ ಏನು?

ಭೂಮಿಯ ಮೇಲಿರುವ ನೀರಿನಲ್ಲಿ ಶೇಕಡ 97ರಷ್ಟು ಭಾಗ ಉಪ್ಪು ನೀರು, ಮಾನವ ಬಳಕೆಯ ಸಿಹಿನೀರಿನ ಪಾಲು ಅತ್ಯಂತ ಕಡಿಮೆ. ಅದನ್ನು ನಾವು ಶುಚಿಯಾಗಿಟ್ಟುಕೊಳ್ಳದಿದ್ದರೆ ಹೇಗೆ?

ನಮ್ಮ ನೀರಿನ ಮೂಲಗಳೆಂದರೆ, ಕೆರೆ-ಬಾವಿಗಳು ಮತ್ತು ನದಿಗಳು. ಈ ಮೂಲಗಳಿಗೆ ನಗರಗಳ ಕೊಳಚೆ ನೀರು, ಕಾರ್ಖಾನೆಗಳು ಬಳಸಿದ ನೀರು ಮೊದಲಾದ ಹೊಲಸೆಲ್ಲ ಸೇರಿ ಅದರಿಂದ ಆಗುವ ದುಷ್ಪರಿಣಾಮವನ್ನು ಬೇರೆ ಹೇಳಬೇಕಾಗಿಲ್ಲ.

ವಿಷಪೂರಿತವಾದ ನೀರು ಬಳಸುವ ಜನರಿಗೆ ವಿಷಮ ಶೀತಜ್ವರ, ಕಾಲರಾ, ಅತಿಸಾರ, ಆಮಶಂಕೆ, ಕಾಮಾಲೆ ಮೊದಲಾದ ರೋಗ ರುಜಿನಗಳು ಕಟ್ಟಿಟ್ಟ ಬುತ್ತಿಯಾಗುತ್ತವೆ.

ಕಲುಷಿತ ನೀರಿನಿಂದ ಉಂಟಾಗುವ ರೋಗಗಳಿಂದಾಗಿ 73 ದಶಲಕ್ಷ ಕೆಲಸದ ದಿನಗಳು ಹಾಳಾಗುತ್ತವೆಂದೂ ಅಂದಾಜು ಮಾಡಲಾಗಿದೆ. ಆದ್ದರಿಂದ ಕುಡಿಯುವ ನೀರಿನ ಶುಚಿತ್ವವನ್ನು ಕಾಪಾಡುವುದು ಮುಖ್ಯವಾದುದು. ಶುದ್ಧವಾದ ಕುಡಿಯುವ ನೀರು ಸರಬರಾಜೊಂದರಿಂದಲೇ ನೂರಕ್ಕೆ 60ರಷ್ಟು ರೋಗ ರುಜಿನಗಳನ್ನು ತಡೆಗಟ್ಟಬಹುದೆಂದು ವೈದ್ಯಕೀಯ ತಜ್ಞರು ಹೇಳುತ್ತಾರೆ.

ಮಾನವನು ತನಗೆ ತಾನೇ ಮಾಡಿಕೊಂಡಿರುವ ಮತ್ತೊಂದು ಅಪಚಾರ ವಾಯು ಮಾಲಿನ್ಯ. ಮಾನವ ಅನ್ನ, ನೀರುಗಳಿಲ್ಲದೆ ಕೆಲ ಸಮಯ ಜೀವಿಸಿರಲಿಕ್ಕೆ ಸಾಧ್ಯವಾದೀತು. ಆದರೆ ಗಾಳಿ ಬಿಟ್ಟು ಇರಲು ಸಾಧ್ಯವಿಲ್ಲ. ಎಂತಲೇ ಅದಕ್ಕೆ 'ಪ್ರಾಣವಾಯು' ಎನ್ನುವುದು.

ಆದರೆ ಇಂದು ನಾವು ಸೇವಿಸುವ ಗಾಳಿ ಎಷ್ಟು ಶುದ್ಧವಾಗಿದೆ? ಆಧುನಿಕ ಜಗತ್ತಿನಲ್ಲಿ ವಾತಾವರಣವನ್ನು ಕೆಡಿಸುವ ಸ್ಪರ್ಧೆಯೇ ನಡೆದಂತಿದೆ. ಸುತ್ತಣ ಹವೆ ಕೆಟ್ಟರೆ ನಮ್ಮ ಸೊತ್ತಿಗೇ ಅಪಾಯ ಎನ್ನುವ ಅರಿವೂ ನಮಗಿಲ್ಲ.

ನಗರ ಪ್ರದೇಶಗಳಲ್ಲಂತೂ ನಾವು ನಿತ್ಯ ವಿಷದ ಗಾಳಿಯನ್ನೇ ಸೇವಿಸುತ್ತಿದ್ದೇವೆ. ಪೆಟ್ರೋಲ್ ಮತ್ತು ಡೀಸಲ್ ವಾಹನಗಳು ಉಗುಳುವ ಹೊಗೆಯಲ್ಲಿನ ಸೀಸದ ಅಂಶ ಗಾಳಿಯನ್ನು ಸೇರುತ್ತದೆ. ಇನ್ನು ರಾಸಾಯನಿಕ ಕಾರ್ಖಾನೆಗಳು, ಅಲ್ಯೂಮಿನಿಯಂ ಸ್ಥಾವರಗಳು, ಕಾಗದ-ಸಿಮೆಂಟ್ ಕಾರ್ಖಾನೆಗಳು ಕಕ್ಕುವ ಹೊಗೆ ಮತ್ತು ಅನಿಲಗಳಲ್ಲಿ ಶುದ್ಧ ಗಾಳಿಯನ್ನು ಕೆಡಿಸುವ ಕಾರ್ಬನ್ ಡೈ ಆಕ್ಸೈಡ್, ಸಲ್ಫರ್ ಡೈ ಆಕ್ಸೈಡ್, ನೈಟ್ರೋಜಿನ್ ಆಕ್ಸೈಡ್, ಹೈಡ್ರೋ ಕಾರ್ಬನ್, ಮಸಿ ಧೂಳಿನ ಕಣಗಳು, ಲೋಹದ ತುಂತುರುಗಳು ಮೊದಲಾದವೆಲ್ಲ ಸೇರಿ ಅಂತಹ ಗಾಳಿಯನ್ನು ಸೇವಿಸುವ ಮಾನವ ಅನುಭವಿಸುವ ನೋವು ಅಷ್ಟಿಷ್ಟಲ್ಲ.

ಕೆಟ್ಟ ಹವಾ ಸೇವನೆಯಿಂದ ಶ್ವಾಸಕೋಶದ ರೋಗ, ಉಸಿರು ಕಟ್ಟುವುದು, ಕಣ್ಣು ಉರಿಯುವುದು, ಗಂಟಲು ಕೆರೆಯುವುದು, ಮಕ್ಕಳಿಗೆ ಬುದ್ಧಿಮಾಂದ್ಯವುಂಟಾಗುವುದು, ಮೊದಲಾಗಿ ಅನೇಕ ಆರೋಗ್ಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ನಮ್ಮ ಪರಿಸರ ಕೆಡಲು ಕಾರಣವಾಗಿರುವುದು ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆ. ಇದು ಈಗ ವಿಶ್ವದ ನೆಮ್ಮದಿಗೇ ಸವಾಲಾಗಿ ನಿಂತಿದೆ. ಜನಸಂಖ್ಯಾ ಹೆಚ್ಚಳದ ಪರಿಣಾಮ ಒಂದೆರಡು ಮಾತುಗಳಲ್ಲಿ ಹೇಳುವಂತಹುದಲ್ಲ. ಮಾನವ ಈ ಜನಸಂಖ್ಯಾ ಒತ್ತಡದಲ್ಲಿ ತನ್ನ ಬದುಕಿನ ಅಗತ್ಯಗಳನ್ನು ಪೂರೈಸಿಕೊಳ್ಳಲು ಏನೆಲ್ಲಾ ಪ್ರಯತ್ನ ನಡೆಸಿದ್ದಾನೆ. ಅವನ ಸ್ವಾರ್ಥದ ಪ್ರಯತ್ನಕ್ಕೆ ಮೊದಲು ಬಲಿಯಾದ ನಿಸರ್ಗ ಸಂಪತ್ತೆಂದರೆ ಅರಣ್ಯ.

ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ಪ್ರತಿವರ್ಷ 10 ಲಕ್ಷ ಹೆಕ್ಟೇರಿನಷ್ಟು ಅರಣ್ಯ ನಾಶವಾಗುತ್ತಿದೆ. ಕೃಷಿ ಭೂಮಿಯ ವಿಸ್ತರಣೆ, ಜಲವಿದ್ಯುತ್ ಮತ್ತು ನೀರಾವರಿ ಜಲಾಶಯಗಳ ನಿರ್ಮಾಣ, ಕೈಗಾರಿಕೆಗಳ ಬೆಳವಣಿಗೆ, ಉರುವಲು, ರಸ್ತೆ ನಿರ್ಮಾಣ, ವಸತಿ ನಿವೇಶನಗಳು ಹೀಗೆ ಅನೇಕ ಕಾರಣಕ್ಕಾಗಿ ಅರಣ್ಯ ನಾಶ ನಡೆದಿದೆ.

ಬಹುಗುಣ ಅವರ ಮಾತಿನಲ್ಲೇ ಹೇಳಬೇಕೆಂದರೆ 'ಅರಣ್ಯಗಳು ಆಮ್ಲಜನಕದ ಬ್ಯಾಂಕುಗಳು'. ಪರಿಸರ ಸಮತೋಲನಕ್ಕೆ ಅವುಗಳ ಕಾಣಿಕೆ ಅಮೂಲ್ಯವಾದುದು. ಯಾವುದೇ ರಾಷ್ಟ್ರದಲ್ಲಿ ಪರಿಸರ ಸಮತೋಲನ ದೃಷ್ಟಿಯಿಂದ ಒಟ್ಟು ವಿಸ್ತೀರ್ಣದ ಮೂರನೆಯ ಒಂದು ಭಾಗದಷ್ಟು ಅರಣ್ಯ ಪ್ರದೇಶವಿರಬೇಕು.

ಅರಣ್ಯದಿಂದ ನೆಲ, ಜಲ ಮತ್ತು ಹವೆ ಮೂರರ ರಕ್ಷಣೆಯೂ ಆಗುತ್ತದೆ. ಭೂಮಿಯ ಸವಕಳಿ ತಪ್ಪಿಸುವಲ್ಲಿ ಅರಣ್ಯದ ಪಾತ್ರ ಪರಿಣಾಮಕಾರಿಯಾದುದು. ದನಗಳಿಗೆ ಮೇವಿರಲಿ, ಅಡಿಗೆಗೆ ಕಟ್ಟಿಗೆಯಿರಲಿ, ಕಟ್ಟಡಗಳಿಗೆ ಮರಮುಟ್ಟುಗಳಿರಲಿ ಅರಣ್ಯವೇ ಆಧಾರ. ಆದರೆ ಈಚೆಗೆ ಅರಣ್ಯ ಪ್ರದೇಶ ಕಡಿಮೆಯಾಗುತ್ತಿರುವುದು ಕಳವಳಕಾರಿ ಅಂಶ. 'ಸಮೃದ್ಧ ಕಾಡಿನಿಂದ ಸಮೃದ್ಧ ಮಳೆ' ಎನ್ನುವ ಮಾತಿನ ಸತ್ಯವನ್ನು ಇತ್ತೀಚಿನ ಮಳೆಯ ಹಂಗಾಮುಗಳು ತೋರಿಸಿಕೊಟ್ಟಿವೆ.

ಪರಿಸರ ಸಂರಕ್ಷಣೆಯ ಒಂದು ಮಹತ್ವದ ಕ್ರಮವಾಗಿ ಅರಣ್ಯ ಪ್ರದೇಶದ ವಿಸ್ತರಣೆ ಮತ್ತು ಸಾಮಾಜಿಕ ಅರಣ್ಯ ಬೆಳೆಸುವ ಕಾರ್ಯ ತ್ವರಿತವಾಗಿ ನಡೆಯಬೇಕಾಗಿದೆ. ಗ್ರಾಮಾಂತರದಲ್ಲಿ ಸಾಮಾಜಿಕ ಅರಣ್ಯವನ್ನು ಬೆಳೆಸುವ ಕಾರ್ಯಕ್ರಮ

ಯಶಸ್ವಿಯಾದರೆ ಅಲ್ಲಿನ ಜನತೆಯ ಅರಣ್ಯ ವಸ್ತುಗಳ ಅಗತ್ಯದ ಪೂರೈಕೆಯಾಗುತ್ತದೆ.

ಆರ್ಥಿಕ ದೃಷ್ಟಿಯಿಂದಲಂತೂ ಅರಣ್ಯ ಸಂಪತ್ತು ಅತ್ಯಂತ ಬೆಲೆಬಾಳುವಂತಹುದು. ಅರಣ್ಯ ಸಂರಕ್ಷಣೆಯ ಇನ್ನೊಂದು ಆಶಯವೆಂದರೆ ಆ ಮೂಲಕ ವನ್ಯಜೀವಿಗಳ ಸಂರಕ್ಷಣೆ. ವನ್ಯಜೀವಿಗಳು ನಿಸರ್ಗ ನೀಡಿದ ಕಾಣಿಕೆಗಳೆಂಬುದನ್ನು ನಾವು ಮರೆಯಬಾರದು. ಅವುಗಳನ್ನು ಬೇಟೆಯಾಡಿ ಕೊಲ್ಲುವುದು ಅಪರಾಧ.

ಸಮೃದ್ಧ ಕಾಡಿನಲ್ಲಿ ಸ್ವತಂತ್ರವಾಗಿರುವ ವನ್ಯಜೀವಿಗಳನ್ನು ನೋಡುವುದೇ ಕಣ್ಣಿಗೆ ಒಂದು ಸುಂದರ ಅನುಭವ. ಒಟ್ಟಾರೆ, "ಕಾಡಿದ್ದರೆ ನಾಡು" ಎಂಬ ಗಾದೆ ಮಾತು ನಮಗೆ ಸದಾ ನೆನಪಿರಬೇಕು. ಕಾಡು ಕಡಿದು ನಾಡು ಬೆಳೆಸುವುದಲ್ಲ, ಕಾಡು ಬೆಳೆಸಿ ನಾಡು ಕಟ್ಟಬೇಕು. ಈಚೆಗೆ ಗ್ರಾಮೀಣ ಜನ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿರುವುದೂ ಪರಿಸರದ ಮೇಲೆ ಪರಿಣಾಮವುಂಟುಮಾಡಿದೆ. ನಗರ ಜನಸಂಖ್ಯೆ ಹೆಚ್ಚಾಗಿ ಅಲ್ಲಿನ ಜೀವನ ದಿನ ದಿನಕ್ಕೆ ದುರ್ಭರವಾಗುತ್ತಿದೆ.

ನಗರಗಳು ಇಂದು ವಸತಿ ಸಮಸ್ಯೆ, ಸಾರಿಗೆ ಸಮಸ್ಯೆ, ಆರೋಗ್ಯ ಸಮಸ್ಯೆ, ಸರಬರಾಜು ಸಮಸ್ಯೆ, ಶಾಲೆಗಳ ಸಮಸ್ಯೆ, ವಿದ್ಯುತ್ ಪೂರೈಕೆ ಸಮಸ್ಯೆ – ಹೀಗೆ ಸಮಸ್ಯೆಗಳ ಅಗರಗಳಾಗಿವೆ. ಕೊರತೆಯ ನೆಲೆಗಳಾಗಿವೆ.

ನಗರಗಳಲ್ಲಿರುವ ಕೊಳಚೆ ಪ್ರದೇಶಗಳಂತೂ ನಾರುವ ನರಕಗಳಾಗಿವೆ. ಅಲ್ಲಿನ ಮಕ್ಕಳಿಗೆ ಆರೋಗ್ಯ ರಕ್ಷಣೆ ಕ್ಲಿಷ್ಟ ಸಮಸ್ಯೆಯಾಗಿದೆ. ವಾಹನ ಅಪಘಾತಗಳ ಸಂಖ್ಯೆಯಂತೂ ಹೇಳತೀರದು. ಬದುಕಿನ ದುರ್ಭರ ಪರಿಸ್ಥಿತಿಯಲ್ಲಿ ನಗರಗಳು, ಕಳ್ಳತನ, ದರೋಡೆ, ಅಪರಾಧಗಳು, ರೋಗ–ರುಜಿನಗಳ ಸಂತೆಗಳಾಗಿವೆ.

ಇಂತಹ ಪರಿಸ್ಥಿತಿಯಲ್ಲಿ ಮಾನವ ಹೇಗೆ ನೆಮ್ಮದಿಯಿಂದ ಇರಲು ಸಾಧ್ಯವಾದೀತು? ನಗರದ ಸಿಮೆಂಟ್ ರಸ್ತೆಗಳು ಮತ್ತು ಸಿಮೆಂಟ್ ಕಟ್ಟಡಗಳ ಪರಿಣಾಮವಾಗಿ ತಂಪಾದ ಹವೆಗೂ ಇಲ್ಲಿ ಅಭಾವ. ಹೊಗೆ ಮಂಜು, ಹೊಲಸು ವಾತಾವರಣ ನಗರ ಪ್ರದೇಶಗಳ ಸೌಂದರ್ಯ ಮತ್ತು ನೆಮ್ಮದಿಯನ್ನೇ ಹಾಳು ಮಾಡಿವೆ.

ಇದನ್ನು ತಪ್ಪಿಸಬೇಕೆಂದರೆ ನಗರ ಪ್ರದೇಶಕ್ಕೆ ಹಳ್ಳಿಗರ ವಲಸೆಯನ್ನು ತಪ್ಪಿಸಬೇಕು. ಹಳ್ಳಿಗರು ಇದ್ದಲ್ಲಿಯೇ ಎಲ್ಲ ಜೀವನ ಸೌಲಭ್ಯಗಳನ್ನು ಕಲ್ಪಿಸಬೇಕು. ಪರಿಸರ ಮಾಲಿನ್ಯ ತನ್ನ ಕರಾಳ ಹಸ್ತವನ್ನು ಚಾಚಿ ಮಾನವನ ಬದುಕಿನ ಅರ್ಥವನ್ನೇ ಕಳೆಯುತ್ತಿರುವುದನ್ನು ಇತ್ತೀಚೆಗೆ ವಿಚಾರವಂತರೆಲ್ಲ ಗಮನಿಸಿದಂತೆ ಕಾಣುತ್ತದೆ. ಜಗತ್ತಿನ ಎಲ್ಲ ಭಾಗಗಳಲ್ಲೂ ಪರಿಸರ ಪ್ರಜ್ಞೆ ಈಗ ಜಾಗೃತವಾಗುತ್ತಿದೆ.

ಜಲ ಮಾಲಿನ್ಯ, ನೆಲಮಾಲಿನ್ಯ, ಅನಿಲ ಮಾಲಿನ್ಯಗಳಂತಹ ಪರಿಸರ ಮಾಲಿನ್ಯಗಳ ಸಾಲಿಗೆ ಮತ್ತೊಂದು ಮಾಲಿನ್ಯ ಸೇರುತ್ತದೆ ಅದು ಶಬ್ದಮಾಲಿನ್ಯ. ಸಾಮಾನ್ಯವಾಗಿ ಯಾರೇ ಆದರೂ ಶಾಂತ ವಾತಾವರಣದಲ್ಲಿ ಬದುಕಬೇಕೆಂದು ಇಚ್ಛಿಸುವುದು ಸಹಜ. ಆದರೆ ಇಂದಿನ ಪರಿಸ್ಥಿತಿ ಏನಾಗಿದೆ? ತೊಟ್ಟಿಲ ಕೂಸಿನಿಂದ ಹಿಡಿದು ಕಷ್ಟದ ದುಡಿಮೆಯ ಕಾರ್ಮಿಕನವರೆಗೆ ಯಾರಿಗೂ ನೆಮ್ಮದಿಯಿಲ್ಲದಂತಾಗಿದೆ.

ಇಲ್ಲೂ ಮಾನವನ ಅಸಭ್ಯತನದ್ದೇ ಕೈವಾಡ. ಕೆಲವರಿಗೆ ಪ್ರಶಾಂತ ವಾತಾವರಣವನ್ನು ಹಾಳು ಮಾಡುವಲ್ಲೇ ತೃಪ್ತಿಯಿರುವಂತೆ ಕಾಣುತ್ತದೆ. ಇನ್ನೊಬ್ಬರ ನೆಮ್ಮದಿಯಾಗಿರ–ಬಹುದೆಂದು ಯಾರಾದರೂ ತಿಳಿದಿದ್ದರೆ, ಅದು ಕೇವಲ ಭ್ರಮೆ. ಶಬ್ದಮಾಲಿನ್ಯದಿಂದ ನಮ್ಮ ಮನಸ್ಸಿನ ಮೇಲೆ ಬಹಳ ಕೆಟ್ಟ ಪರಿಣಾಮಗಳಾಗುತ್ತವೆ. ದೈಹಿಕವಾಗಿಯೂ ಕೆಲವು ಅನಿಷ್ಟಗಳಾಗುತ್ತವೆ. ಆದ್ದರಿಂದ ವಾತಾವರಣವನ್ನು ಶಾಂತವಾಗಿಡಲು ಎಲ್ಲರೂ ಯತ್ನಿಸಬೇಕು. ಮಾನವ ತನ್ನೆಲ್ಲ ನೋವು, ದಣಿವುಗಳನ್ನು ಪ್ರಶಾಂತ ವಾತಾವರಣದಲ್ಲಿ ಮರೆಯುತ್ತಾನೆ. ಅಂತಹ ವಾತಾವರಣ ಆತನ ದುಡಿಮೆಗೆ ಮತ್ತೆ ಚೇತನವುಂಟು ಮಾಡುತ್ತದೆ.

ಈ ಭೂಮಿಗೆ ನಾವೇ ಒಡೆಯರಲ್ಲ, ಇಲ್ಲಿರುವ ಸಂಪನ್ಮೂಲಗಳಿಗೆ ಹೇಗೆ ಒಂದು ಮಿತಿ ಇದೆಯೋ ಅದನ್ನು ನಾವು ಬಳಸುವಲ್ಲಿಯೂ ಒಂದು ಮಿತಿಯಿದೆ. ಜೊತೆಗೆ ಬಳಸಿದ ಹಾಗೆಯೇ ಅದನ್ನು ಬೆಳೆಸುವಲ್ಲಿಯೂ ನಮ್ಮ ಕರ್ತವ್ಯವಿದೆ.

ಈ ಲೋಕದ ಬದುಕು ನಮಗೆ ಸಮಾಧಾನವುಂಟು ಮಾಡಬೇಕಾದರೆ ಪರಿಸರದ ಪರಿಶುದ್ಧತೆಯನ್ನು ಕಾಪಾಡಲು ನಾವು ಶ್ರಮಿಸಬೇಕು. ಜೀವ ಸಂಪತ್ತಿನ ರಕ್ಷಣೆ ಮತ್ತು ಪೋಷಣೆ, ಶಕ್ತಿ ಮೂಲಗಳ ಅಭಿವೃದ್ಧಿ ಮತ್ತು ಶಕ್ತಿಯ ಸಮರ್ಥ ಬಳಕೆ, ಕಸವನ್ನು ರಸವಾಗಿ ಪರಿವರ್ತಿಸುವ ಜಾಣ್ಮೆ, ಜನಸಂಖ್ಯಾ ನಿಯಂತ್ರಣದ ಸರಳ ವಿಧಾನ, ನಿಸರ್ಗ ನಿಯಮಗಳಿಗೆ ಹೊಂದಿಕೊಳ್ಳುವ ಕ್ರಮ ಇವೆಲ್ಲವುಗಳ ಬಗ್ಗೆ ನಾವು ಗಂಭೀರವಾಗಿ ವಿಚಾರಮಾಡಬೇಕು.

ನಾವಿರುವ ಜಗತ್ತಿನಲ್ಲಿ ನಮ್ಮ ಮುಂದಿನ ಪೀಳಿಗೆಗೂ ನೆಮ್ಮದಿಯಿಂದ ಬದುಕುವ, ಅವಕಾಶವಿರಬೇಕು. ಅಂತಹ ಅವಕಾಶವೆಂದರೆ ಇಂದಿನಿಂದ ಪರಿಸರಕ್ಕೆ ಒದಗಿ ಬಂದಿರುವ ಆಪತ್ತನ್ನು ತಡೆಗಟ್ಟುವುದು.





# ಭೂಮಿಯ ತಾಪಮಾನ ಏರಿಕೆ : ಪರಿಣಾಮ–ದುಷ್ಪರಿಣಾಮ

◆ ಡಾ॥ ವಿಜಯಲಕ್ಷ್ಮೀ ಬಾಳೇಕುಂದ್ರಿ
ಮಕ್ಕಳ ಹೃದ್ರೋಗ ತಜ್ಞೆ – ಲೇಖಕರು

ಮಹಾಪೂರದಿಂದ ಎಲ್ಲೆಲ್ಲೂ ಹಾಹಾಕಾರ ಕಾಣುತ್ತಿದ್ದೇವೆ. ಕೆಲವರು ನಾವೇನು ತಪ್ಪು ಮಾಡಿದ್ದೇವೆಂದು ನಮಗೀ ಶಿಕ್ಷೆ? ಎಂದರೆ ಇನ್ನೂ ಕೆಲವರು ದೇವರಿಗೆ ಹಿಡಿ ಶಾಪ ಹಾಕುತ್ತಿದ್ದಾರೆ. ಜನರ ಈ ಪ್ರತಿಕ್ರಿಯೆ ಎಷ್ಟು ಅವೈಜ್ಞಾನಿಕವೆಂದು ನಾವು ವೈಜ್ಞಾನಿಕವಾಗಿ ಯೋಚಿಸಿದಾಗ ಅರ್ಥವಾಗುತ್ತದೆ. ಮಹಾಪೂರ ಬರಲು ಕಾರಣ ವಿಪರೀತ ಮಳೆ ಸುರಿದದ್ದು. ಹಾಗಾದರೆ ಅತಿವೃಷ್ಟಿಗೆ ವೈಜ್ಞಾನಿಕ ಕಾರಣವೇನು? ಎಲ್ಲರು ಯೋಚಿಸಬೇಕಾದ ವಿಚಾರ. ಭೂಮಂಡಲದ ಮೇಲೆ ಸುಮಾರು 71% ಭಾಗ ನೀರು ತುಂಬಿದೆ. ಅದರಲ್ಲಿ ಸಮುದ್ರ ಮಹಾಸಾಗರಗಳೇ 97% ಭಾಗ ಭೂಮಿಯನ್ನು ಆವರಿಸಿವೆ. ನೀರು ಸದಾ ಚಲನಶೀಲ ಎಂದೂ ಒಂದೇ ರೀತಿ ಇರುವುದಿಲ್ಲ. ಶೀತ ಹೆಚ್ಚಿದ್ದಲ್ಲಿ ಹಿಮವಾಗಿದ್ದರೆ, ನದಿ ಹಳ್ಳ ಕೊಳ್ಳಗಳಲ್ಲಿ ಹರಿಯುವ ನೀರು ಸಮುದ್ರ ಸೇರುತ್ತದೆ. ಭೂಮಂಡಲದ ಮೇಲಿರುವ ನೀರು ಎಲ್ಲೆಲ್ಲಿದೆ, ಹೇಗಿದೆ ಎಂದು ವಿವರಿಸಬೇಕೆಂದರೆ, 97% ಮಹಾಸಾಗರದಲ್ಲಿದ್ದರೆ, 2% ಹಿಮವಾಗಿದೆ (glaciers) 0.62% ನೀರು ಭೂಮಿಯ ಕೆಳಗೆ ಅಂತರ್ಜಲವಾಗಿದೆ (Under Ground Water), 0.009% ಕೆರೆಗಳಲ್ಲಿದ್ದರೆ, 0.008% ಉಪ್ಪುನೀರಿನ ಕೊಳಗಳಲ್ಲಿದೆ, 0.001% ಹವೆಯಲ್ಲಿದ್ದು, ಕೇವಲ 0.0001% ಮಾತ್ರ ನದಿಯಲ್ಲಿ ಹರಿಯುತ್ತದೆ. ಹಾಗಾಗಿ ಹಿಂದಿನ ಕಾಲದಲ್ಲಿ ಎಲ್ಲಾ ಸಂಸ್ಕೃತಿಗಳು ನದಿಗಳ ಪಕ್ಕದಲ್ಲೇ ಬೆಳೆಯುತ್ತಿದ್ದವು. ಈಗಲೂ ಕೂಡ ರೈತರು ತಮ್ಮ ಬೆಳೆಗಾಗಿ, ಮಳೆನೀರು, ಇಲ್ಲ ನದಿ ನೀರು, ಇಲ್ಲವೆ Bore Well ನಿಂದ ಅಂತರ್ಜಲದ ಮೇಲೆ ಅವಲಂಬಿಸಿದ್ದಾರೆ. ಒಂದು ನದಿ ಹಲವು ರಾಜ್ಯದ ಮುಖಾಂತರ ಹರಿದಾಗ ನೀರಿಗಾಗಿ ಹಾಹಾಕಾರ, ಜಗಳ, ದೂರುವುದು, ಸರ್ವೇಸಾಮಾನ್ಯ. ಭೂಮಿಯ ಮೇಲೆ ಕೇವಲ 2.5% ನೀರು ಮಾತ್ರ ಸಿಹಿನೀರು ಇದ್ದು, ಇದರಲ್ಲಿ 69% ಹಿಮವಾಗಿ ಇರುವುದರಿಂದ ಮನುಷ್ಯರ ಬಳಕೆಗೆ ಬರುವ ನೀರಿನ ಪ್ರಮಾಣ ಅತ್ಯಂತ ಕಡಿಮೆ ಇರುವುದರಿಂದ ಎಲ್ಲೆಲ್ಲೂ ನೀರಿನ ಅಭಾವ ಕಾಣುತ್ತಿದ್ದೇವೆ. ಆದ್ದರಿಂದ ಕುಡಿಯುವ ನೀರಿಗಾಗಿ ಅಕ್ಕಪಕ್ಕದ ಮನೆಯವರ ಜಗಳ ಹಿಡಿದು, ರಾಜ್ಯಗಳ ಮಧ್ಯೆ, ರಾಷ್ಟ್ರಗಳ ಮಧ್ಯೆ ಕಲಹ ಜಗತ್ತಿನಾದ್ಯಂತ ನಡೆಯುತ್ತಿವೆ. ನೀರಿಗಾಗಿ ಯುದ್ಧವಾಗುವ ಸಮಯ ದೂರವಿಲ್ಲ. ಕಾರಣ ಹರಿಯುವ ನೀರಿಗೆ ಗಡಿ, ಸೀಮೆ ಇಲ್ಲ! ನದಿಗಳು ಬೆಟ್ಟದಲ್ಲಿ ಉಗಮಿಸಿ ಸಮುದ್ರ ಸೇರುವ ವರೆಗೂ ಸೀಮಾತೀತವಾಗಿ ಹರಿಯುತ್ತವೆ. ನೈಲ್ ನದಿ 7 ರಾಷ್ಟ್ರಗಳಲ್ಲಿ ಹರಿಯುತ್ತದೆ. ಪವಿತ್ರ ಗಂಗೆ ಕೂಡ 5 ರಾಜ್ಯಗಳಲ್ಲಿ ಹರಿಯುತ್ತದೆ. ಈ ನದಿಗಳಲ್ಲಿ ಸಿಹಿ ನೀರು ಹರಿಯಬೇಕೆಂದರೆ ನದಿ ಪಾತ್ರಗಳಲ್ಲಿ ಚೆನ್ನಾಗಿ ಮಳೆಯಾಗಬೇಕು. ಮಳೆಯಾಗಲು ನೀರು ಹೊತ್ತ ಕಪ್ಪು ಮೋಡಗಳು ಬರಬೇಕು. ಈ ಮೋಡಗಳು ಉತ್ಪತ್ತಿ ಆಗುವುದೇ ಸಮುದ್ರದ ನೀರು ಆವಿ ಆಗಿ ಹವೆಯಲ್ಲಿ ಸೇರಿಕೊಂಡಾಗ ಅದು ನೀರಿನ ಹನಿಗಳಾಗಿ ಮೋಡಗಳಲ್ಲಿ ಸೇರಿಕೊಂಡು ಸಮುದ್ರದ ಮೇಲಿಂದ ಗಾಳಿ ಭೂಮಿ ಕಡೆಗೆ ಚಲಿಸಿದಾಗ ಮೋಡಗಳೂ ಕೂಡ ಭೂಮಿಯ ಕಡೆಗೆ ಚಲಿಸುತ್ತವೆ. ಮೊದಲು ಸಮುದ್ರದ ದಡವಾದ ಕರಾವಳಿಗೆ ತಲುಪಿ ಅಲ್ಲಿ ಮಳೆ ಸುರಿಸುತ್ತವೆ. ನಮ್ಮ ದೇಶದ ಪಶ್ಚಿಮ ಘಟ್ಟಗಳು ಅರಬ್ಬಿ ಸಮುದ್ರದ ಮೇಲಿಂದ ಬಂದ ಮೋಡಗಳನ್ನುತಡೆದು ಸಹ್ಯಾದ್ರಿ ಪರ್ವತ ಶ್ರೇಣಿಗಳ ಮೇಲೆ ಮಲಪ್ರಭಾ, ದೂಧಗಂಗಾ, ವೇದಗಂಗಾ, ಶರಾವತಿ, ನೇತ್ರಾವತಿ, ತುಂಗಾ, ಇವು ಎಲ್ಲಾ ಮೈತುಂಬಿ ಹರಿಯಲು ಕಾರಣ ಧಾರಾಕಾರವಾಗಿ ಸುರಿದ ಮಳೆ, ಆರು ತಿಂಗಳಿಗೆ ಆಗಬೇಕಾದ ಮಳೆ ಆರೇ ದಿನದಲ್ಲಿ ಆಗಿತ್ತು. ಅದರ ಮೇಲೆ ಮಹಾರಾಷ್ಟ್ರದಲ್ಲಿ ಮಹಾಮಳೆಯಿಂದ ಆದ ನೆರೆ ಹಾವಳಿಯಿಂದ ಅವರು ತಮ್ಮ ಡ್ಯಾಂಮ್‌ನಿಂದ ನೀರು ಬಿಡಬೇಕಾಯಿತು. ಹಾಗಾಗಿ ಉತ್ತರ ಕರ್ನಾಟಕದ ಜನ ನೆರೆ ಹಾವಳಿಯಿಂದ ಮನೆ ಮಠ ಕಳೆದುಕೊಂಡು ತತ್ತರಿಸಬೇಕಾಯಿತು. ಈ ಮಹಾ ಮಳೆ ಭೂಮಿಯ ತಾಪಮಾನ ಹೆಚ್ಚುತ್ತಿರುವ ಮುನ್ಸೂಚನೆ ಆಗಿದೆ.

## ಭೂಮಿಯ ತಾಪಮಾನ ಹೆಚ್ಚಲು ಕಾರಣಗಳೇನು?

ಹಲವಾರು ಕಾರಣಗಳಿಂದ ಭೂಮಿಯ ತಾಪಮಾನ ದಿನೇ ದಿನೇ ಹೆಚ್ಚುತ್ತಿದೆ. ಅದರಲ್ಲಿ ಪ್ರಮುಖ ಕಾರಣಗಳೆಂದರೆ:–

1) ಮರಗಳ ಮಾರಣ ಹೋಮ ಮಾಡುತ್ತಿರುವ ಮಾನವ ಸ್ವಾರ್ಥದಿಂದ ಭೂಮಿಯನ್ನು ತಂಪಾಗಿಸುವ ಮರ ಮನಬಂದಂತೆ ಕಡಿಯುತ್ತಿದ್ದಾನೆ. ರಸ್ತೆ ಅಗಲೀಕರಣ,

ಕಾರ್ಖಾನೆ ಸ್ಥಾಪನೆಯಲ್ಲದೆ, ತಂಬಾಕನ್ನು ಸುತ್ತಿ ಸಿಗರೇಟು ಮಾಡಲು ಪ್ರತೀವರ್ಷ 7000 ಬಿಲಿಯನ್ ಟನ್ ಕಾಗದ ಬಳಸಲಾಗುತ್ತಿದೆ. ಆ ಕಾಗದ ತಯಾರಿಸಲು ಮರಗಳ ಮಾರಣ ಹೋಮ ಮಾಡುತ್ತಿದ್ದಾನೆ ಮಾನವ! ಅಷ್ಟೇ ಅಲ್ಲ ಒಂದು ಕೆ.ಜಿ. ತಂಬಾಕು ಹದಮಾಡಲು 118 ಮರಗಳ ಕಟ್ಟಿಗೆ ಸುಡಬೇಕಾಗುತ್ತದೆ. ಹೀಗೆ ತಂಬಾಕು ಉತ್ಪಾದನೆ ಒಂದರಿಂದಲೇ ನಾಡಲ್ಲಿರುವ ಜನರು ಕಾಡಲ್ಲಿರುವ ಮರಗಳನ್ನು ಕಡಿಯುತ್ತಿದ್ದಾರೆ. ಇದಲ್ಲದೆ ಮನೆ ಕಟ್ಟಲು ಮರ ಕಡಿಯುತ್ತಿದ್ದಾರೆ. ಕಾಡನ್ನು ಕಡಿದು ಹೊಲಗದ್ದೆ ಮಾಡುತ್ತಿರುವ ಸ್ವಾರ್ಥಿಗಳು ಭೂಮಿಯ ತಾಪಮಾನ ಹೆಚ್ಚಲು ಕಾರಣರಾಗಿದ್ದಾರೆ. ಮರ ಇದ್ದರೆ ಭೂಮಿ ತಂಪಾಗಿರುತ್ತದೆ.

2) ಪ್ರಮುಖವಾಗಿ ಹವೆಯಲ್ಲಿ ಇಂಗಾಲದ ಡೈಯಾಕ್ಸೈಡ್ ($Co_2$) ಅಂಶ ಹೆಚ್ಚಾದರೆ ಭೂಮಿಯ ತಾಪಮಾನ ಹೆಚ್ಚುತ್ತದೆ. ರೈತರು ತಮ್ಮ ಹೊಲದಲ್ಲಿ ರಾಶಿ ಮಾಡಿದ ನಂತರ ಬೆಂಕಿ ಹಚ್ಚಿದರೆ, ಪ್ರತಿಭಟಿಸುವವರು ಟೈಯರ್ ಸುಟ್ಟರೆ, ಸಫಾಯಿ ಕರ್ಮಚಾರಿಗಳು ಹಸಿ ಎಲೆಗಳಿಗೆ ಬೆಂಕಿಹಚ್ಚಿದರೆ, ಕಲ್ಲಿದ್ದಲು, ಇದ್ದಲು ಸುಟ್ಟಾಗ ಅದರಲ್ಲೂ ಶಾಖೋತ್ಪತ್ತಿಯಿಂದ ವಿದ್ಯುತ್ ಉತ್ಪಾದಿಸುವ ಕಾರ್ಖಾನೆಯಿಂದ ಮತ್ತು ಸಕ್ಕರೆ, ಸಾರಾಯಿ ತಯಾರಿಸುವ ಇತರೆ ಕಾರ್ಖಾನೆಗಳಿಂದ ಬರುವ ಹೊಗೆಯಿಂದ Carbondioxide ಹವೆಯಲ್ಲಿ ಹೆಚ್ಚುತ್ತದೆ. Petrol, Diesel ವಾಹನಗಳಿಂದ ಕೂಡ ($Co_2$) ಅನಿಲ ಹೊರಬರುತ್ತದೆ.

3) ಹೊಲದಲ್ಲಿ ರೈತರು ಬಳಸುವ ರಸಾಯನಿಕ ಗೊಬ್ಬರದಿಂದ ಉತ್ಪತ್ತಿ ಆಗುವ ಮೀಥೇನ್ ಮತ್ತು ನೈಟ್ರಸ್ ಆಕ್ಸೈಡ್ ಅನ್ನುವ ವಾಯುವಿನಿಂದ ಕೂಡ ಭೂಮಿಯ ತಾಪಮಾನ ಹೆಚ್ಚುತ್ತದೆ. ಇದರಿಂದ ರೈತರು ಸಾವಯುವ ಕೃಷಿ ಮಾಡುವುದು ಉತ್ತಮ. 'Green house gases' ಎಂದು ಕುಖ್ಯಾತಗೊಂಡ Ozone ಮತ್ತು Chlorofolorocarbon ಮತ್ತು Hydroflours gases ಹವೆಯಲ್ಲಿ ತಾಪಮಾನವನ್ನು ಹಿಡಿದು ಇಟ್ಟುಕೊಳ್ಳುತ್ತವೆ.

4) ಬಿಸಿಲಿನಿಂದ ನೀರು ಆವಿ ಆಗಿ ವಾತಾವರಣದಲ್ಲಿ ಸೇರಿಕೊಂಡಾಗ ಅದು ಬಿಸಿಯನ್ನು ಹಿಡಿದಿಟ್ಟುಕೊಂಡು ಭೂಮಂಡಲದ ಸುತ್ತಲಿನ ತಾಪಮಾನ ಹೆಚ್ಚಲು ಕಾರಣವಾಗುತ್ತದೆ. ಭೂಮಿಯ ತಾಪಮಾನದಿಂದ ಆವಿ ಹೆಚ್ಚಾಗಿ ವಾತಾವರಣದಲ್ಲಿ ಬಿಸಿ ಹಿಡಿದಿಟ್ಟುಕೊಂಡು ತಾಪಮಾನ ಇನ್ನೂ ಹೆಚ್ಚಲು ಕಾರಣವಾಗಿ ಅದರಿಂದ ಮತ್ತೆ ನೀರು ಹೆಚ್ಚು ಆವಿ ಆಗುವಂತೆ ಮಾಡುತ್ತದೆ. ಈ ವಿಷ ವರ್ತುಲವನ್ನು ನಾವು ಮುರಿಯಬೇಕೆಂದರೆ ಭೂಮಿಯನ್ನು ತಂಪಾಗಿಡುವ ಹಸಿರು ಗಿಡ ಮರಗಳನ್ನು ಹೆಚ್ಚಾಗಿ ಬೆಳೆಸಬೇಕು.

### ಭೂಮಿಯ ತಾಪಮಾನ ಹೆಚ್ಚುವುದರಿಂದ ಆಗುವ ದುಷ್ಪರಿಣಾಮವೇನು?

ಭೂಮಿಯ ತಾಪಮಾನ ಹೆಚ್ಚುತ್ತಿದ್ದಂತೆ ಬಿರುಗಾಳಿ, ಸುಂಟರಗಾಳಿಯಲ್ಲದೆ ಚಂಡಮಾರುತಗಳು, ಭೂಮಿಗೆ ಅಪ್ಪಳಿಸಿ ಅಪಾರ ಪ್ರಮಾಣದ ಹಾನಿ ಮಾಡುತ್ತವೆ. ವಾತಾವರಣದಲ್ಲಿರುವ ನೀರಿನ ಅಂಶದ ತಾಪಮಾನ ಹೆಚ್ಚಾದಾಗ ಚಂಡಮಾರುತಗಳು ಸಮುದ್ರದ ಮೇಲಿಂದ ಅತ್ಯಂತ ಹೆಚ್ಚು ವೇಗದಲ್ಲಿ ಚಲಿಸುತ್ತ ಕಣಗಳಿಗೆ ಅಪ್ಪಳಿಸುತ್ತವೆ. ಇದರಿಂದ ಸಮುದ್ರದ ದಡದಲ್ಲಿ ಇದ್ದವರ ಮನೆಗಳ ಚಪ್ಪರ ಹಾರಿಹೋಗಿ, ವಿದ್ಯುತ್ ತಂತಿಗಳ ಕಂಬ ಕಿತ್ತುಹೋಗಿ ವಿಪರೀತ ಮಳೆ ಸುರಿಯುತ್ತದೆ. ಗಾಳಿ ಮಳೆಗಳ ಅಬ್ಬರಕ್ಕೆ ಜನಜೀವನ ತತ್ತರಿಸಿ ಹೋಗುತ್ತದೆ. ಆದರೆ ಅಧಮ ಮಾನವರು ತಮ್ಮ ತಪ್ಪಿನಿಂದ ಇಡೀ ಜಗತ್ತಿನ ತಾಪಮಾನ ಹೆಚ್ಚಿ ತಪ್ಪು ಮಾಡದಿರುವ ಅಮಾಯಕ ಬಡವರು ಪ್ರಕೃತಿ ವಿಕೋಪಕ್ಕೆ ತುತ್ತಾಗುತ್ತಾರೆ ಎಂಬ ಅರಿವು ಇರುವುದಿಲ್ಲ. ಕಾರಣ ಅವರಿಗೆ ಸಾಮಾನ್ಯ ಜ್ಞಾನ ವಿಜ್ಞಾನ ಎರಡರ ಅರಿವೂ ಇರುವುದಿಲ್ಲ.

ಜಾಗತಿಕ ತಾಪಮಾನ ಹೆಚ್ಚುವುದನ್ನು ಹೇಗೆ ನಿಯಂತ್ರಿಸಬೇಕು? ಹೆಚ್ಚೆಚ್ಚು ಸಸಿ ನೆಟ್ಟು ಮರಗಳನ್ನು ಬೆಳಸಬೇಕು. ಕಲ್ಲಿದ್ದಲು, ಪೆಟ್ರೋಲು, ಡೀಸೇಲ್ ಬಳಕೆ ಆದಷ್ಟು ಕಡಿಮೆ ಮಾಡಬೇಕು. ಇಂಗಾಲದ ಡೈಯಾಕ್ಸೈಡ್ ($Co_2$) ತಾಪಮಾನ ಹೆಚ್ಚಿಸಲು ಪ್ರಮುಖ ಕಾರಣವಾಗಿರುವುದರಿಂದ ಹಸಿರು ಎಲೆಗಳು ಈ ಅನಿಲ ಬಳಸಿ ನಮಗೆ ಪ್ರಾಣವಾಯು ಕೊಡಬಲ್ಲದಲ್ಲದೆ. ಭೂಮಿಯನ್ನು ತಂಪುಗೊಳಿಸುತ್ತವೆ. ಬಳಸಿ ಎಸೆಯುವ ಪ್ಲಾಸ್ಟಿಕ್ ಉಪಯೋಗಿಸಬಾರದು, ಬಟ್ಟೆಯ ಚೀಲದಲ್ಲಿ ಸಾಮಾನು ತರುವುದನ್ನು ರೂಢಿಮಾಡಿಕೊಳ್ಳಬೇಕು. ಆದಷ್ಟು ಕಡಿಮೆ Electricity Air conditioner ಬಳಸಬೇಕು. ಹಳೆ ಕಾಲದಂತೆ ಬೀಸಣಿಗೆ ಬಳಸಿದರೆ ಉತ್ತಮ. ಎಲ್ಲಕಡೆಗೂ LED ಬಲ್ಬುಗಳನ್ನು ಬಳಸಬೇಕು. ಇದರಿಂದ ಹಣದ ಉಳಿತಾಯವಾಗುತ್ತದೆ. ಜೊತೆಗೆ ಭೂಮಿಯ ತಾಪಮಾನವೂ ಹೆಚ್ಚುವುದಿಲ್ಲ. ಕಾಲುನಡಿಗೆ, ಸೈಕಲ್ ತುಳಿಯುವುದನ್ನು ಹೆಚ್ಚಿಸಬೇಕು. ಭೂಮಿತಾಯಿ ನಮ್ಮನ್ನು ಕಾಪಾಡಿದರೆ ನಾವು ಅವಳ ತಾಪಮಾನವನ್ನು ನಿಯಂತ್ರಿಸಲು ಶ್ರಮಿಸಬೇಕು.

◆

# ಮಾರ್ಚ್ 20, 2008ರ ತರಂಗ ವಾರಪತ್ರಿಕೆಯಲ್ಲಿ ಪ್ರಕಟವಾದ ಲೇಖನದ ಆಯ್ದ ಭಾಗಗಳು

## ಕ್ಷಮಿಸಿ... ಭಕ್ಷಿಸು ಬೇಡ!

ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಸ್ಕೌಟಿಂಗ್ ಆರಂಭವಾದದ್ದು ಬಹಳ ವಿಶಿಷ್ಟ ರೀತಿಯಲ್ಲಿ. ಅಮೆರಿಕಾ ವಾಣಿಜ್ಯೋದ್ಯಮಿ ವಿಲಿಯಮ್ ಡಿ ಬಾಯ್ಸ್ ಕಾರ್ಯನಿಮಿತ್ತ ಲಂಡನ್‌ಗೆ ಪಯಣಿಸುತ್ತಿದ್ದರು. ಹಿಮ ಸುರಿಯುತ್ತಿದ್ದ ಆ ದಿನ ಅವರಿಗೆ ದಾರಿ ತಿಳಿಯದೆ ಕಕ್ಕಾವಿಕ್ಕಿಯಾಗಿ, ಹತ್ತಿರದಲ್ಲೇ ನಡೆದುಹೋಗುತ್ತಿದ್ದ ದಾರಿಹೋಕ ಬಾಲಕನಲ್ಲಿ ವಿಳಾಸವನ್ನು ಕೇಳಿದರು. ಆಗ ಬಾಲಕ ಅವರನ್ನು ಸರಿಯಾದ ವಿಳಾಸಕ್ಕೆ ತಲುಪಲು ಸಹಾಯ ಮಾಡಿದ. ಅದಕ್ಕೆ ಪ್ರತಿಯಾಗಿ ಅವರು ಅವನಿಗೆ ಹಣ ನೀಡಿದಾಗ ಆ ಬಾಲಕ ದಿಟ್ಟತನದಿಂದ, **'ಕ್ಷಮಿಸಿ ನಾನೊಬ್ಬ ಸ್ಕೌಟ್, ನಾನು ಭಿಕ್ಷೇಸು ತೆಗೆದುಕೊಳ್ಳುವುದಿಲ್ಲ'** ಎಂದು ಹೇಳಿ ಹೋಗಿಯೇ ಬಿಟ್ಟ. ವಿಲಿಯಮ್ ಅವರಿಗೆ ಬಾಲಕನ ದಿಟ್ಟತನ ಮತ್ತು ಪ್ರಾಮಾಣಿಕತೆ ಸಂತೋಷವನ್ನೂ ಆಶ್ಚರ್ಯವನ್ನೂ ಒಟ್ಟಿಗೇ ಉಂಟು ಮಾಡಿತು. ಆ ಬಳಿಕ ಅವರು ಲಂಡನ್ನಿನ ಪ್ರಧಾನ ಕಚೇರಿಗೆ ತೆರಳಿ ಸ್ಕೌಟ್ ಬಗ್ಗೆ ಮಾಹಿತಿ ಪಡೆದುಕೊಂಡು, ಅಮೆರಿಕದಲ್ಲಿಯೂ ಸ್ಕೌಟ್ ಹರಡಲು ಕಾರಣರಾದರು. ಅಲ್ಲಿನ ಭವನವೊಂದರಲ್ಲಿ ಇಂದಿಗೂ ಅನಾಮಧೇಯ ಬಾಲಕನ ನೆನಪನ್ನು ಸ್ಮರಿಸಲಾಗುತ್ತದೆ. ಅತ್ಯಂತ ಉನ್ನತ ಮಟ್ಟದ ಸ್ಕೌಟ್ ಕಾರ್ಯಕ್ರಮಗಳೆಲ್ಲ ಅಮೆರಿಕಾದಲ್ಲಿ ನಡೆಯುತ್ತವೆ. ವಿಶ್ವದ ಸ್ಕೌಟ್ ಗಣತಿಯಲ್ಲಿ ಅಮೆರಿಕಾ ಅಗ್ರಸ್ಥಾನ ಪಡೆದಿದೆ.

## ಸ್ಕೌಟ್ ವೈಶಿಷ್ಟ್ಯಗಳು

ಮೂರು ಬೆರಳನ್ನು ತೋರಿಸುವ ಬಲಗೈ ವಂದನೆ, ಎಡಗೈ ಹಸ್ತಲಾಘವ ಸ್ಕೌಟ್‌ಗಳ ವಿಶೇಷತೆಗಳಲ್ಲೊಂದು. ಸ್ಕೌಟ್ ದಳ ಕುದುರೆ ಲಾಳಾಕಾರದಲ್ಲಿ ನೆರೆಯುತ್ತದೆ.

ಸ್ಕೌಟ್ ಸಭೆಗಳಿಗೆ ಆಗಮಿಸಿದ ಅತಿಥಿಗಳನ್ನು ಒಳಗೊಳ್ಳುವ ಅಂಗವಾಗಿ ಅವರಿಗೂ ಕಂಠವಸ್ತ್ರ ತೊಡಿಸಿ ಸ್ಕೌಟ್‌ಗಳು ಸಂಭ್ರಮಿಸುತ್ತಾರೆ. ಸಮವಸ್ತ್ರದೊಂದಿಗೆ ಕಂಠವಸ್ತ್ರವನ್ನು ಧರಿಸುವುದು ಸ್ಕೌಟ್‌ಗಳ ವಿಶೇಷತೆ. ಈ ಕಂಠವಸ್ತ್ರದ ಶುಚಿತ್ವ ಆಯಾ ಸ್ಕೌಟ್‌ನ ಶಿಸ್ತನ್ನು ಸೂಚಿಸುತ್ತದೆ. ತುರ್ತು ಸಂದರ್ಭಗಳಲ್ಲಿ ಈ ಕರವಸ್ತ್ರ ಹಗ್ಗದಂತೆ, ಬ್ಯಾಂಡೇಜ್‌ನಂತೆಯೂ ಉಪಯೋಗಕ್ಕೆ ಬರುತ್ತದೆ.

ಸ್ಕೌಟ್ ದಂಡ, ಸ್ಕೌಟ್ ಕಿಟ್‌ನ ಉಪಯುಕ್ತ ಸೇರಿಕೆ, ಪರ್ವತ ಪ್ರದೇಶಗಳಲ್ಲಿ ಹಾದು ಹೋಗುವಾಗ, ನಿರ್ಜನ ಪ್ರದೇಶಗಳಲ್ಲಿ ಕಾರ್ಯ ನಿರತವಾಗಿದ್ದಾಗ ಇದು ಉಪಯುಕ್ತ. ಅಷ್ಟೇ ಅಲ್ಲ ಇಂಥ ಹಲವಾರು ದಂಡಗಳನ್ನು ಉಪಯೋಗಿಸಿ ಸೇತುವೆ ನಿರ್ಮಿಸುವುದೂ, ತೆಪ್ಪ ರಚಿಸುವುದೂ, ಧ್ವಜ ಸ್ತಂಭ ರಚಿಸುವುದೂ ಸಾಧ್ಯ. ನದಿಯ ಆಳ ಕಂಡುಹಿಡಿಯಲು, ಕಾಲುವೆ ಹಾರಲು ಉಪಯುಕ್ತ. ದಂಡದಲ್ಲಿ ಮೀಟರ್, ಸೆಂ.ಮೀ.ಗಳನ್ನು ಗುರುತಿಸಿಕೊಳ್ಳುವ ಸ್ಕೌಟ್‌ಗಳಿಗೆ ದಂಡ ಬಹೂಪಯೋಗಿ ಅಸ್ತ್ರ. ಕೆಲವರು ತಮ್ಮ ಸಾಧನೆಗಳನ್ನು ದಂಡದ ಮೇಲೆ ಕೆತ್ತಿಕೊಳ್ಳುವುದೂ ಇದೆ.

ಸ್ಕೌಟ್‌ಗಳಲ್ಲಿ ಆರು ಅಥವಾ ಎಂಟು ಬಾಲಕರ ದಳಕ್ಕೆ ಪ್ಯಾಟ್ರೋಲ್ ಎಂದು ಹೆಸರು. ಪ್ರತೀ ದಳವೂ ಆಯಾಯ ಸ್ಥಳದ ಹೆಸರನ್ನೂ, ಒಂದು ಸ್ಥಳೀಯ ಪ್ರಾಣಿಯ ಲಾಂಛನವನ್ನೂ ಹೊಂದಿರುತ್ತದೆ. ಪ್ಯಾಟ್ರೋಲ್ ನಾಯಕನಿಗೊಂದು ಪತಾಕೆ ಇದ್ದು, ಅದರ ಎರಡೂ ಕಡೆಗಳಲ್ಲಿ ಆ ಪ್ರಾಣಿಯ ಚಿತ್ರವಿರುತ್ತದೆ. ಬೆಟ್ಟ, ಗುಡ್ಡಗಳಲ್ಲಿ ನಡೆಯುವ ಆಟಗಳಲ್ಲಿ, ಆಯಾಯ ದಳದ ಪ್ರಾಣಿಯ ಕೂಗುಗಳನ್ನು ಅನುಸರಿಸಿ ದಳದ ಸದಸ್ಯರು ತಮ್ಮ ಗುರುತು ಹೇಳಿಕೊಳ್ಳುತ್ತಾರೆ. ರಾತ್ರಿಯ ವೇಳೆಯಲ್ಲಿ ಅವಿತುಕೊಂಡಿರುವಾಗ ಆಯಾಯ ಪ್ಯಾಟ್ರೋಲ್‌ಗಳಿಗೆ ಆಯಾಯ ಪ್ರಾಣಿಯ ಕರೆಗಳ ಮೂಲಕ ಪರಸ್ಪರ ವ್ಯವಹರಿಸುತ್ತಾರೆ. ಇತರ ಪ್ಯಾಟ್ರೋಲ್‌ನವರು ಈ ಕರೆಯನ್ನು ಅನುಸರಿಸುವಂತಿಲ್ಲ. ಇದು ಪ್ರಕೃತಿ ಸಂಬಂಧಿ ವಿಷಯಗಳನ್ನು ಅಧ್ಯಯನ ಮಾಡುವ ದಿಶೆಯಲ್ಲಿ ಮೊದಲ ಹೆಜ್ಜೆಯೂ ಹೌದು. ಪ್ರತಿ ದಳಕ್ಕೂ ಒಂದೊಂದು ಪ್ರಾಣಿಯ ಹೆಸರಿದ್ದಂತೆ ಒಂದೊಂದು ಧ್ಯೇಯವಾಕ್ಯವೂ ಇರುತ್ತದೆ. ಉದಾಹರಣೆಗೆ: ಮರಕುಟುಕ ಎಂದರೆ ಹಿರಿಮೆಯೆಂದರೆ, ಕಷ್ಟದ ದುಡಿಮೆ ಇತ್ಯಾದಿ.

◆



# ಸೌಹಾರ್ದ ನಮ್ಮ ಉಸಿರಾಗಬೇಕು

◆ ಡಾ॥ ಗೊ.ರು. ಚನ್ನಬಸಪ್ಪ
ಅಧ್ಯಕ್ಷರು, ಪ್ರಕಟಣಾ ಸಮಿತಿ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್

"ಎಲ್ಲೋ ಮಗು ಅಳುತ್ತಾ ಇದೆ, ಒಂದೇ ಸಮನೆ. ಗುಡಿ-ಮಠ-ಚರ್ಚಿನ ಗಂಟೆ, ಧೂಪ, ದೀಪಗಳ ಮಧ್ಯೆ, ದೇಶೋದ್ಧಾರದ ರಾಜಕಾರಣದ ಜೇಡನ ಬಲೆಗಳ ಉದ್ದಕ್ಕೂ, ಎಲ್ಲೋ ಮಗು ಅಳುತ್ತಾ ಇದೆ, ಒಂದೇ ಸಮನೆ". ಇವು ನಮ್ಮ ರಾಷ್ಟ್ರಕವಿ ಡಾ. ಜಿ.ಎಸ್.ಶಿವರುದ್ರಪ್ಪನವರ ಒಂದು ಕವನದ ಸಾಲುಗಳು.

ಈ ಅಳುವ ಸಮುದಾಯವನ್ನು ಸೇವೆಯ ತೊಟ್ಟಿಲಲ್ಲಿ ಇಟ್ಟು ಬದುಕಿನ ಭರವಸೆಯ ಜೋಗುಳ ಹಾಡಿ, ತೂಗಿ ತಣಿಸುವ ಪಾತ್ರ ವಹಿಸಲು ಸಾಧ್ಯವಿರುವ ಜಾಗತಿಕ ಸೇವಾ ಸಂಸ್ಥೆಯೆಂದರೆ ನಮ್ಮ 'ಸ್ಕೌಟ್ಸ್ ಮತ್ತು ಗೈಡ್ಸ್' ಎಂದು ನಾನು ಭಾವಿಸಿದ್ದೇನೆ. ಈ ಸಂಸ್ಥೆಯು ಯಾವುದೇ ದೇಶ-ಧರ್ಮಗಳ ನಿರ್ಬಂಧವಿಲ್ಲದ, ಸ್ವಯಂ ಸೇವೆಯ ಒಂದು ಮಾನವೀಯ ಸಂಬಂಧದ ಮಹಾ ಸಂಘಟನೆ.

ನಮ್ಮ ಸಂಘಟನೆಯ ಧ್ಯೇಯೋದ್ದೇಶಗಳಲ್ಲಿ ಸ್ನೇಹ-ಸೌಹಾರ್ದಗಳ ಸಾಧನೆಯಿದೆ. ಉತ್ತಮ ತತ್ವದ ಘೋಷಣೆಯಿದೆ. ಇವೆಲ್ಲಕ್ಕೂ ಮಿಗಿಲಾಗಿ ವ್ಯಕ್ತಿ ನಿರ್ಮಾಣದ ಮಹತ್ವದ ಉದ್ದೇಶವಿದೆ. ಮಾನವ ಸಮುದಾಯದ ನೆಮ್ಮದಿಗೆ ಬೇಕಾದ ಸಮಸ್ತ ಜೀವನ ಸೂತ್ರಗಳೂ ಇವೆ.



**SCOUT ಎಂದರೆ**

S - Sincerity - ನಿಷ್ಠೆ – ಪ್ರಾಮಾಣಿಕತೆ
C - Curiosity – ಕುತೂಹಲ
O - Originality – ಸೃಜನಶೀಲತೆ
U - Utility - ಪ್ರಯೋಜನ – ಉಪಯುಕ್ತತೆ
T - Totality – ಸಮಗ್ರತೆ

**GUIDE ಎಂದರೆ**

G - Guidance - ಮಾರ್ಗದರ್ಶನ
U - Understanding - ತಿಳಿವಳಿಕೆ – ಅರಿವು
I - Interest - ಶ್ರದ್ಧಾಸಕ್ತಿ
D - Dedication - ಅರ್ಪಣ ಭಾವ
E - Enthusiasm - ಸ್ಫೂರ್ತಿ, ಉತ್ಸಾಹ

ಕಂಡದ್ದನ್ನು ಬಯಸುವುದು ಕಾಮ (ಆಸೆ). ಅದು ದೊರೆಯದಿದ್ದರೆ ಕ್ರೋಧ. ದೊರೆತರೆ ಇನ್ನಷ್ಟೂ ಬೇಕೆಂಬ ಲೋಭ. ಅದೂ ದೊರೆತರೆ ಅದು ತನ್ನ ಕೈ ಬಿಟ್ಟು ಹೋಗಬಾರದೆಂಬ ಮೋಹ. ಅದು ತನ್ನಲ್ಲಿಯೇ ಉಳಿದರೆ ತನ್ನೊಬ್ಬನಲ್ಲೇ ಇದೆ ಎಂಬ ಮದ (ಅಹಂ), ತನ್ನಂತೆ ಇನ್ನೊಬ್ಬನಲ್ಲಿದ್ದರೆ ಮತ್ಸರ- ಹೀಗೆ ಆಸೆಯಿಂದ ಆರು ವೈರಿಗಳು (ಅರಿಷಡ್ವರ್ಗ) ಹುಟ್ಟಿಕೊಳ್ಳುತ್ತವೆ.



ಶ್ರೋತೃಗಳಲ್ಲಿ ಮೂರು ಬಗೆ ಇರುತ್ತಾರೆ.

1. **ಕುತೂಹಲದ ಶ್ರೋತೃಗಳು:** ಅವರಿಗೆ ಕೇವಲ ಕುತೂಹಲ. ಅರ್ಥವೋ, ಅನರ್ಥವೋ, ಅಗತ್ಯವೋ, ಅನಗತ್ಯವೋ- ಸುಮ್ಮನೆ ಕುತೂಹಲಕ್ಕಾಗಿ ಕೇಳುವುದು. ಒಂದಷ್ಟು ಕಿವಿಗೆ ಬಿದ್ದರಾಯಿತು. ಅವರು ಅರಿವಿನ ಹೊರಸ್ತರದಲ್ಲೇ ಉಳಿಯುವಂಥವರು.

2. **ಆಸಕ್ತಿಯ ಶ್ರೋತೃಗಳು:** ಹೆಚ್ಚು ಜ್ಞಾನ, ಹೆಚ್ಚು ಮಾಹಿತಿ ಸಂಗ್ರಹ ಅವರ ಉದ್ದೇಶ. ಮೊದಲ ವರ್ಗಕ್ಕಿಂತ ಇವರು ಹೆಚ್ಚು ಕಿವಿಗೊಟ್ಟು ಕೇಳುತ್ತಾರೆ. ಕೇಳಿಕೊಂಡಂತೆ ಬದಲಾವಣೆ ಹೊಂದಬೇಕೆಂಬ ಆಸಕ್ತಿಯೇನೂ ಅವರಿಗಿರುವುದಿಲ್ಲ.

3. **ಬದ್ಧತೆಯ ಶ್ರೋತೃಗಳು:** ಇವರು ಮೊದಲ ಎರಡು ವರ್ಗದವರಿಗಿಂತ ಹೆಚ್ಚು ಗಾಢವಾಗಿ, ಗಂಭೀರವಾಗಿ ಆಲಿಸುತ್ತಾರೆ. ಅವರಿಗೆ ಮುಖ್ಯವಾಗುವುದು ಕೇವಲ ಮಾಹಿತಿ ಸಂಗ್ರಹವಲ್ಲ; ಬದಲಾವಣೆ ಹೊಂದುವುದು. ಅವರು ಕೇಳುವುದನ್ನು ಮುಕ್ತವಾಗಿ ಕೇಳುತ್ತಾರೆ. ಒಳಿತನ್ನು ಒಪ್ಪಿಕೊಂಡು ಅದನ್ನು ಬಳಸಿಕೊಂಡು ಒಳಿತನ್ನೇ ಮಾಡುತ್ತಾರೆ.

ನಾವು ಹೃದಯದಿಂದ ಓದಬೇಕು; ಹೃದಯದಿಂದ ಕೇಳಬೇಕು. ಹೃತ್ಪೂರ್ವಕ ಎಂಬ ಮಾತು ಬಳಕೆಯಾಗುವುದು ಈ ಕಾರಣದಿಂದಲೇ. ನಾವು ಯಾರಿಗಾದರೂ ತಲೆಬಾಗಿ ನಮಸ್ಕರಿಸಿದರೂ 'ತಲೆಪೂರ್ವಕವಾಗಿ ನಿಮಗೆ ವಂದಿಸುತ್ತೇನೆ' ಎಂದು ಯಾರೂ ಹೇಳುವುದಿಲ್ಲ. 'ಹೃತ್ಪೂರ್ವಕವಾಗಿ ವಂದಿಸುತ್ತೇನೆ' ಎಂದೇ ಹೇಳುವುದು.



'ಸೌಹಾರ್ದ' ಎಂದರೆ ಸಹೃದಯತೆ, ಸೌಜನ್ಯ, ಸ್ನೇಹ, ಪ್ರೀತಿ, ವಾತ್ಸಲ್ಯ, ಮಮತೆ, ಆತ್ಮೀಯತೆ, ಭ್ರಾತೃತ್ವ, ಅಭಿಮಾನ ಎಂದೆಲ್ಲ ಅರ್ಥೈಸಬಹುದು. 'ಸೌಹಾರ್ದ' ಎಂದರೇನು ಎಂದು ಯಾರಾದರೂ ಕೇಳಿದರೆ ಈ ಶಬ್ದಾರ್ಥಗಳನ್ನು ಕೊಡಬಹುದೇ ವಿನಃ ಅದರ ಅನುಭವವಾಗುವುದಿಲ್ಲ. ಅದು ನಮ್ಮ ಕಣ್ಣಿಗೆ ಕಾಣುವಂತಹ ವಸ್ತುವಲ್ಲ; ಅಥವಾ ಹಾಳೆಯ ಮೇಲೆ ಬರೆದ ಅಕ್ಷರ ಚಿತ್ರವಲ್ಲ. ಅದು ಹೃದಯದಿಂದ ಅನುಭವಿಸಬೇಕಾದ ಒಂದು ಭಾವ. ಸೌಹಾರ್ದ ಎನ್ನುವುದು ಒಂದು ಪ್ರಜ್ಞೆ, ಜಾಗೃತಿ, ಎಚ್ಚರ. ಅದೊಂದು ಅನಿರ್ವಚನೀಯ ಅನುಭವ. ಪ್ರಜ್ಞಾವಂತರೆಲ್ಲ ಅದನ್ನು ಅನುಭವಿಸಬಹುದು. ಅದನ್ನು ಶಾಸ್ತ್ರಗ್ರಂಥಗಳಲ್ಲಿ ಓದಲಾಗದು; ಕೇಳಿ ತಿಳಿಯಲಾಗದು. ತಿಳಿಯುವ ಒಂದು ಮಾರ್ಗವೆಂದರೆ, ಆ ಅನುಭವಕ್ಕೆ ನಮ್ಮನ್ನು ಒಡ್ಡಿಕೊಳ್ಳುವುದು. ಆ ದೃಷ್ಟಿಯಿಂದ ಸೌಹಾರ್ದ ಕುರಿತು ನಾವು ಚಿಂತನೆ ನಡೆಸಬೇಕಾಗುತ್ತದೆ.

ಯಾವುದೇ ಕೆಲಸವನ್ನು ಆಗುವಂತೆ ಮಾಡಬೇಕಿದ್ದರೆ ಸಂಬಂಧಪಟ್ಟ ಎಲ್ಲರೂ ಕೂಡಿ ಕೆಲಸ ಮಾಡಬೇಕು. ಆ ಕೂಡಿ ಕೆಲಸಮಾಡಲು ಬೇಕಾದ ಮೊದಲ ಅಗತ್ಯವೆಂದರೆ ನಮ್ಮಲ್ಲಿರಬೇಕಾದ ಸೌಹಾರ್ದಭಾವ.

ಇಂದಿನ ಸನ್ನಿವೇಶದಲ್ಲಿ ಅತ್ಯಂತ ಕೊರತೆ ಇರುವ ಈ ಸೌಹಾರ್ದ ಸಾಧನೆ ಮೊದಲು ಆಗಬೇಕಾದ ಕೆಲಸವೆಂದು ನಾನು ಭಾವಿಸಿದ್ದೇನೆ. ವಾಸ್ತವವಾಗಿ, ಮಾನವ ತನ್ನ ನೆಮ್ಮದಿಗೆಂದು ತಾನೇ ಸೃಷ್ಟಿಸಿಕೊಂಡ ಒಂದು ನೀತಿಮಾರ್ಗ ಧರ್ಮ. ಆದರೆ ಅದೇ ಮಾನವ ತನ್ನ ಅಪ್ರಜ್ಞೆ ಮತ್ತು ಅವಜ್ಞೆಗಳಿಂದ ಆ ಧರ್ಮದ ಕಾರಣದಿಂದಲೇ ತನ್ನ ನೆಮ್ಮದಿಯನ್ನು ಕಳೆದುಕೊಳ್ಳುತ್ತಿರುವುದೊಂದು ವಿಪರ್ಯಾಸದ ಸಂಗತಿ. ಇದು ಧರ್ಮದ ತಪ್ಪಲ್ಲ. ಧರ್ಮ ಅಪವ್ಯಾಖ್ಯಾನಕ್ಕೆ ಒಳಗಾಗಿದ್ದು ಮತ್ತು ಅಪಬಳಕೆಯಾದದ್ದು, ಕೇವಲ ಕರ್ಮಾಚರಣೆಗಳೇ ಧರ್ಮ ಎಂದು ನಾವು ತಿಳಿದದ್ದು. ನಿಜ. ಮಾನವನ ಬದುಕು ಸಹನೀಯವಾಗಬೇಕಾದರೆ ಧರ್ಮ ಅಗತ್ಯವಾಗುತ್ತದೆ. ಆದರೆ ಆ ಅಗತ್ಯದ ಧರ್ಮದ ಬಗೆಗೆ ಸ್ಪಷ್ಟ ಅರಿವಿರಬೇಕಾಗುತ್ತದೆ. ಜಗತ್ತಿನಲ್ಲಿ ಅಸಂಖ್ಯಾತ ಧರ್ಮ ಸಿದ್ಧಾಂತಗಳಿರಬಹುದು. ಆದರೂ ಆ ಎಲ್ಲ ಧರ್ಮಗಳ ಆಶಯವೂ ಮಾನವನ ಬದುಕಿನ ನೆಮ್ಮದಿಯೇ ಆಗಿದೆ.



"ಶ್ರೇಷ್ಠರು ಸಮಾನವಾಗಿ ಚಿಂತಿಸುತ್ತಾರೆ" ಎಂಬ ಮಾತೊಂದಿದೆ. ಅಂತೆಯೇ ಜಗತ್ತಿನಲ್ಲಿ ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿರುವ ಹಿಂದೂ, ತಾವೋ, ಷಿಂಟೋ, ಜೈನ, ಬೌದ್ಧ, ಇಸ್ಲಾಂ, ಗ್ರೀಕ್, ಜೋರಾತ್ರುಪ್ಪ, ಯಹೂದಿ, ಕ್ರೈಸ್ತ, ಸೂಫಿ, ಸಿಖ್, ಬಹಾಯಿ ಇತ್ಯಾದಿ ಧರ್ಮಗಳ, ಪಂಥಗಳ ಸ್ಥಾಪಕರು ಮತ್ತು ದಾರ್ಶನಿಕರ ಜೀವನಗಳನ್ನು, ಅವರ ಬೋಧನೆಗಳನ್ನು ಗಮನಿಸಿದರೆ ಅವರೆಲ್ಲರ ಆದರ್ಶಗಳು, ಮೌಲ್ಯಗಳು ಮತ್ತು ನಡೆ ನುಡಿಗಳಲ್ಲಿ ಸಮಾನ ಅಂಶಗಳೇ ಇರುವುದನ್ನು ಗುರುತಿಸಬಹುದು.

ಈ ಲೋಕೋತ್ತರ ಚೇತನಗಳು ಸಾರಿದ ಸಂದೇಶಗಳು ಹೊರನೋಟಕ್ಕೆ ಭಿನ್ನವೆಂಬಂತೆ ಕಂಡರೂ ಅವುಗಳು ಅಂತರಂಗ ಚಿಂತನೆ ಒಂದೇ ಆಗಿರುವುದು ಸ್ಪಷ್ಟವಾಗಿದೆ. ಯಾವ ಧರ್ಮವೂ ಮಾನವ–ಮಾನವ ಸಂಬಂಧಗಳನ್ನು ವಿರೋಧಿಸಿಲ್ಲ. ಅಂತಹ ಸಂಬಂಧಗಳನ್ನು ಬೆಸೆಯದ ಯಾವುದಾದರೂ ಧರ್ಮವಿದ್ದರೆ ಅದು ಧರ್ಮವೇ ಅಲ್ಲ. ಈ ಮಾನವ ಸಂಬಂಧಗಳ ಬೆಸುಗೆಗೆ ಬೇಕಾಗಿರುವುದೇ ಸೌಹಾರ್ದ. ಈ ಸೌಹಾರ್ದವನ್ನು ಸಾಧಿಸದಿದ್ದರೆ ಸಂಘ ಸಮಾಜಗಳು ಸುಗಮವಾಗಿ ಸಾಗಲು ಆಗುವುದಿಲ್ಲ. ಲೋಕ ನೆಮ್ಮದಿಯಂತೂ ಸಾಧ್ಯವೇ ಇಲ್ಲ.



ನಮಗೆಲ್ಲ ತಿಳಿದಿರುವಂತೆ ಸಮಾಜದ ಅಸ್ವಸ್ಥತೆಗೆ ಮೂಲ ಕಾರಣ ವ್ಯಕ್ತಿಯ ದೌರ್ಬಲ್ಯ, ದುರಾಸೆ, ದುರಹಂಕಾರ ಮತ್ತು ದುರ್ನಡತೆಗಳಲ್ಲದೆ ಬೇರೆಯಲ್ಲ. ಸಂಬಂಧಗಳು ಸೌಹಾರ್ದಯುತವಾಗಿ ಬೆಳೆಯಬೇಕಾದರೆ ನಾವು ನಾಲ್ಕು ಸೂತ್ರಗಳನ್ನು ಪಾಲಿಸಬೇಕು. ಆ ಸೂತ್ರಗಳೆಂದರೆ – 1. ಆತ್ಮ ಸಂಯಮ (Self Control), 2. ಅನಂತ ತಾಳ್ಮೆ (Abundant Patience), 3. ತತ್ವ ನಿಷ್ಠೆ (Faith in Principle) ಮತ್ತು 4. ಪೂರ್ಣ ಪ್ರಾಮಾಣಿಕತೆ (Complete Honesty)

ಹಾಗೆಯೇ ಅಂತಾರಾಷ್ಟ್ರೀಯ ಶಾಂತಿ, ಕ್ರಮಬದ್ಧ ನ್ಯಾಯ, ಸುರಕ್ಷಿತ ಸ್ವಾತಂತ್ರ್ಯ ಮತ್ತು ಸಂಘಟಿತ ಐಕ್ಯತೆ (International Peace, Orderly Legality, Secured Liberty and Organized Unity) ಇವು ಇಂದಿನ ಅವಸರದ ಅಗತ್ಯಗಳು. ಈ ಅಗತ್ಯಗಳ ಪೂರೈಕೆಯು ಸಾಧ್ಯವಾಗುವುದು ಕೇವಲ ಸೌಹಾರ್ದ ಸಂಬಂಧದಿಂದ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಬಹುಶಃ ಈ ಸೌಹಾರ್ದದ ಸಾಧನೆಗೆ ನಮ್ಮ ಸ್ಕೌಟ್ ಮತ್ತು ಗೈಡ್ ಚಳವಳಿ ತುಂಬ ಸೂಕ್ತವಾದ ಮತ್ತು ಸಮರ್ಥವಾದ ವೇದಿಕೆ ಎಂದು ನಾನು ಭಾವಿಸಿದ್ದೇನೆ. ಏಕೆಂದರೆ, ಈ

ಚಳವಳಿಯ ಮೂಲವೇ ಲೋಕಸೇವೆ, ಲೋಕಪ್ರೀತಿ. ಇಲ್ಲಿ ನಾನು ಮೊದಲೇ ಹೇಳಿದಂತೆ ದೇಶ-ಭಾಷೆಗಳ ಬದು-ಬಾಂದುಗಳಿಲ್ಲ. ಜಾತಿ-ಮತಗಳ ಅಡ್ಡಗೋಡೆಗಳಿಲ್ಲ. ಪಂಥ-ಪಂಗಡಗಳ ಪ್ರತಿಬಂಧವಿಲ್ಲ. ರಾಜಕೀಯ ರಾಡಿಯಿಲ್ಲ. ಅದು ಇದುವರೆಗೆ ಯಾವುದೇ ಕಳಂಕಕ್ಕೆ ಒಳಗಾಗಿಲ್ಲ. ಹಾಗಾಗಿ ಸಮುದಾಯ ಸೌಹಾರ್ದ ಸಾಧನೆಯಲ್ಲಿ ಅರ್ಪಣಾ ಭಾವದ ಮಹತ್ವದ ಪಾತ್ರ ವಹಿಸಲು ಉಳಿದೆಲ್ಲರಿಗಿಂತ ಸ್ಕೌಟ್-ಗೈಡ್ ಬಂಧುಗಳಿಗೆ ಹೆಚ್ಚು ಅವಕಾಶವಿದೆ.

ಸ್ಕೌಟ್ ಮತ್ತು ಗೈಡ್ ಮಕ್ಕಳ ಮನದಲ್ಲಿ ಈ ಸೌಹಾರ್ದ ಭಾವನೆಯನ್ನು ಬೇರೂರುವಂತೆ ಮಾಡುವ ಕೆಲಸ ಹಿರಿಯ ಸ್ಕೌಟ್ ಮತ್ತು ಗೈಡ್ ಬಂಧುಗಳ ಮೇಲಿದೆ ಎಂದು ಭಾವಿಸಿದ್ದೇನೆ.

(ಡಾ॥ ಅನಿಬೆಸೆಂಟ್ ಪಾರ್ಕಿನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಏರ್ಪಡಿಸಿದ ಸ್ಕೌಟ್-ಗೈಡ್ ಶಿಬಿರದಲ್ಲಿ ಮಾಡಿದ ಭಾಷಣದ ಮುಖ್ಯಾಂಶಗಳು.)

# ತೆರೆ ಭವಿಷ್ಯದ ಬೀಗ

ಭವಿಷ್ಯವೆಂಬುದು ನಾಳೆಗಳ ಸರಮಾಲೆ
ಗವಿಯೊಳಗಿನ ಕತ್ತಲೆಯ ಒಗಟು
ರವಿಯಿಣಕದ ಅಡಗಿದ ಮಿಣುಕು
ನವೀನತೆಯ ಭ್ರೂಣ ಅಡಗಿದ ಚಿಪ್ಪು ॥1॥

ಭವಿಷ್ಯದ ಸವಿ ಕನಸುಗಳೆಲ್ಲ
ಭುವಿಯೊಳಗಿನ ನನಸುಗಳೆಲ್ಲ
ಅವಿತಿಟ್ಟಿರುವುದು ಕುಹರದೊಳಗೆ
ಕಾವಳ ಕವಚದ ಬೀಗದೊಳಗೆ ॥2॥

ಕನಸುಗಳೇನೋ ಸವಿವರ್ಣ ರಂಜಿತ
ನನಸಾಗುವುದೇನೋ ತಿಳಿಯದು ಖಚಿತ
ಮನಸೊಳಗೇನೋ ಆಸೆಯ ಮಿಡಿತ
ನಾನೇನೋ ಸಾಧಿಸಬೇಕೆಂಬ ತುಡಿತ ॥3॥

ನಾಳಿನ ಕನಸಿನ ಬೀಗ ತೆಗೆಯೆ
ತೊಲಗಬೇಕು ಅಳುಕಿನ ಮಾಯೆ
ತಳೆಯಬೇಕು ವಿಶ್ವಾಸದ ಪರಿಯ
ಬಾಳ್ವೆಗೆ ಗಳಿಸಬೇಕು ಆತ್ಮಸ್ಥೈರ್ಯ ॥4॥

ಸತ್ಯ ನಿಷ್ಠೆಯ, ಧೈರ್ಯ ಸ್ಥೈರ್ಯದ
ಸಸ್ಯ ಪ್ರೇಮದ, ಪ್ರಾಣಿ ದಯೆಯ
ವ್ಯಯದ ಹಿಡಿತದ ಭ್ರಾತೃಪ್ರೇಮದ
ಕಾಯ ವಾಗ್ವಿಚಾರದ ಶುದ್ಧತೆಯ ॥5॥

ಸರಳ ನಡೆ-ನುಡಿ ಸದ್ವಿಚಾರ
ಧರ್ಮ ದೇಶದ ಕರ್ತವ್ಯ ಬದ್ಧತೆಯ
ಸಾರ ಸಂಪದ ಕೀಲಿ ನನ್ನ ಕರದೊಳಿರೆ
ಕವಾಟ ತೆರೆಯುವುದು, ಕಾಂಬುದು ಉಜ್ವಲ ಭವಿಷ್ಯ ॥6॥

◆ ಯು. ಗೋಪಾಲಕೃಷ್ಣ ಭಟ್, ಎಲ್.ಟಿ.(ಸ್ಕೌಟ್ಸ್)
ಮಂಗಳೂರು



# ರೇಂಜರ್ಸ್ ಶತಮಾನೋತ್ಸವ

◆ ಗೀತಾ ನಟರಾಜ್
ಲೀಡರ್ ಟ್ರೈನರ್(ಗೈಡ್ಸ್)
ರಾಜ್ಯ ಆಯುಕ್ತರು (ಗೈಡ್ಸ್), ಕರ್ನಾಟಕ
ರಾಷ್ಟ್ರೀಯ ಉಪಾಧ್ಯಕ್ಷರು, ನವದೆಹಲಿ

**"ಒಂದು ದೇಶದ ಭವಿಷ್ಯತ್ತಿನ ಸಂಪತ್ತಿಗೆ ಯುವ ಜನತೆಯ ಕೊಡುಗೆ ಅಪಾರ"**. ಯುವಜನತೆಯನ್ನು ಬೆಳೆಸುವ ಜವಾಬ್ದಾರಿ ಮಹತ್ವದಾಗಿರುತ್ತದೆ. ಅವರಿಗೆ ಸುಶಿಕ್ಷಣ, ಜ್ಞಾನ, ಉತ್ತಮ ಸಂಸ್ಕಾರ, ಮೌಲ್ಯಯುತ ಜೀವನ ಶಿಕ್ಷಣವನ್ನು ನೀಡುವಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ನಿರಂತರ ಶ್ರಮಿಸುತ್ತಿದೆ ಹಾಗು ತರಬೇತಿಗಳನ್ನು ನೀಡುತ್ತಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಚಟುವಟಿಕೆಗಳಲ್ಲಿ 16 ವರ್ಷದಿಂದ 25 ವರ್ಷದವರೆಗಿನ ಯುವಜನತೆಗೆ ರೋವರ್ಸ್ ಮತ್ತು ರೇಂಜರ್ಸ್ ಎನ್ನಲಾಗುತ್ತದೆ.

1909ರಲ್ಲಿ "ಬಾಯ್ ಸ್ಕೌಟ್ಸ್" ರ್‍ಯಾಲಿಯು (ಕ್ರಿಸ್ಟೆಲ್ ಪ್ಯಾಲೇಸ್‌ರ್‍ಯಾಲಿ) ಇಂಗ್ಲೆಂಡಿನಲ್ಲಿ ನಡೆದಾಗ, ಕೆಲವು ಹೆಣ್ಣು ಮಕ್ಕಳು ತಾವೂ "ಗರ್ಲ್ ಸ್ಕೌಟ್ಸ್" ಎಂದು ಕಾಣಿಸಿಕೊಂಡರು. ಆಗ ಈ ಚಳವಳಿಯ ಸಂಸ್ಥಾಪಕರಾದ ಲಾರ್ಡ್ ರಾಬರ್ಟ್ ಬೇಡನ್ ಪೊವೆಲ್‌ರವರು, ಹೆಣ್ಣು ಮಕ್ಕಳಿಗೂ ಒಂದು ಚಳವಳಿ ಇರಬೇಕೆಂದು ನಿರ್ಧರಿಸಿ, 2010ರಲ್ಲಿ ಗೈಡಿಂಗನ್ನು ಪರಿಚಯಿಸಿದರು. 1916ರಲ್ಲಿ ಮೊದಲು ಗೈಡ್ ಆಗಿ ಸೇರಿದ್ದ ಹುಡುಗಿಯರು ಬೆಳೆದಂತೆ, ತಮ್ಮ ದಳದಲ್ಲಿ ತುಂಬಾ ಹಿರಿಯರೆನಿಸಿಕೊಂಡವರೂ, ಗೈಡಿಂಗ್‌ಗೆ ತಮ್ಮ ಕೊಡುಗೆಯನ್ನು ನೀಡಲು ಇಚ್ಛಿಸಿರುವುದನ್ನು ಗಮನಿಸಲಾಯಿತು. ಈ ಚಳವಳಿಯಲ್ಲಿ ಕಿರಿಯ ಹೆಣ್ಣು ಮಕ್ಕಳೂ ಸೇರಲಾರಂಭಿಸಿದರು. ಅನೇಕ ಹಿರಿಯ ಹುಡುಗಿಯರೂ ಗೈಡ್ ಆದರ್ಶಗಳಿಗೆ ಆಕರ್ಷಿತರಾಗಿ ಈ ಚಳವಳಿಗೆ ಸೇರಲಿಚ್ಛಿಸಿದರು, ಹೀಗೆ "ಸೀನಿಯರ್ ಗೈಡ್ಸ್" ಅಸ್ತಿತ್ವಕ್ಕೆ ಬಂದಿತು. ಲಾರ್ಡ್ ಬಿ.ಪಿ.ಯವರು ಈ ವಿಭಾಗದಲ್ಲಿ ಹೆಚ್ಚು ಆಸಕ್ತಿಯನ್ನು ಹೊಂದಿ, ಸೀನಿಯರ್ ಗೈಡ್ಸ್‌ಗಳಿಗಾಗಿ ಕಾರ್ಯಯೋಜನೆಯನ್ನು ರೂಪಿಸುವ ಒಂದು ನಿವೇದನೆಯನ್ನು **ಶ್ರೀಮತಿ ಮಾರ್ಕ್‌ಕೇರ್** (Mrs. Mark Kerr)ರವರಿಗೆ ನೀಡಿದರು. ಸೀನಿಯರ್ ಗೈಡ್ ಯೋಜನೆಯು **"ದಿ ಗೆಜೆಟ್"** (The Gazette)ನಲ್ಲಿ ಸರ್ವಾನುಮತವನ್ನು ಪಡೆಯಿತು. 1918ರಲ್ಲಿ ಹೊಸದಳಗಳು ರಚಿಸಲ್ಪಟ್ಟು 1919ರಲ್ಲಿ "ರೇಂಜರಿಂಗ್" ಆರಂಭಗೊಂಡಿತು. ಜುಲೈ 1920 ಆಕ್ಸಫರ್ಡ್ ಸಮ್ಮೇಳನದಲ್ಲಿ (Oxford Conference) **"ರೇಂಜರ್"** ಎಂಬ ಹೆಸರು ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಿತು.

ಕರ್ನಾಟಕದ ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ "ರೇಂಜರ್ಸ್‌ಗಳು" ಪಠ್ಯಾಂಶವನ್ನು ಹೊಂದಿದ್ದು, ಯೋಜಿತ ಕಾರ್ಯಕ್ರಮಗಳ ಸದುಪಯೋಗಗಳನ್ನು ಪಡೆದುಕೊಳ್ಳುತ್ತಾ "ಸೇವೆಗಾಗಿ" ತಮ್ಮ ಉದ್ದೇಶವನ್ನು ಕೈಗೊಳ್ಳುತ್ತಾರೆ. ಇದರ ಜೊತೆಗೆ ನಮ್ಮ ದೇಶದ ಯುವತಿಯರ ಸಬಲೀಕರಣ, ದೇಶಭಕ್ತಿ, ಕರ್ತವ್ಯ, ಆರೋಗ್ಯ ಮತ್ತು ಮನೋಸ್ಥೈರ್ಯಗಳನ್ನು ಹೆಚ್ಚಿಸಿಕೊಂಡು ಉಪಯುಕ್ತ ಹಾಗೂ ಉತ್ತಮ ನಾಗರಿಕಳಾಗುವ ಉದ್ದೇಶವೇ "ರೇಂಜರ್ಸ್"ಗಳದ್ದಾಗಿದೆ. ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ರಾಷ್ಟ್ರ ಮಟ್ಟದಲ್ಲಿ ಕರ್ನಾಟಕದ ರೇಂಜರ್ ವಿಭಾಗದವರು ಸತತವಾಗಿ ಮೊದಲ ಸ್ಥಾನವನ್ನು ಪಡೆಯುತ್ತಿದ್ದಾರೆ ಎಂಬುದು ಹೆಮ್ಮೆಯಾಗುತ್ತದೆ.

1919ರಲ್ಲಿ ಪ್ರಾರಂಭವಾದ "ರೇಂಜರಿಂಗ್" ಚಳವಳಿಗೆ 2019ರ ಜುಲೈ ತಿಂಗಳಿಂದ ರೇಂಜರ್ಸ್‌ಗಳ 100ನೇ ವರ್ಷಾಚರಣೆ ಭಾರತದಲ್ಲಿ ನೆರವೇರುತ್ತಿರುವುದು ಸಂತೋಷದ ಸಂಗತಿ. ರೇಂಜರ್ಸ್ ಶತಮಾನೋತ್ಸವದ ಸಂದೇಶ **"ಮುನ್ನುಗ್ಗಿ, ಬೆಳೆಯಿರಿ, ಹೊಳೆಯಿರಿ (Go, Grow, Glow)"** ಎಂಬ ಧ್ಯೇಯ ವಾಕ್ಯವನ್ನು ಹೊತ್ತು, ರಾಜಸ್ಥಾನ ರಾಜ್ಯದ, ತರಬೇತಿ ಕೇಂದ್ರವಾದ **"ಜಗತಪುರ ಜಯಪುರದಲ್ಲಿ"** ಉದ್ಘಾಟನೆ ಸಮಾರಂಭದೊಂದಿಗೆ ದಿನಾಂಕ: 19.08.2019 ರಿಂದ ದಿನಾಂಕ: 23.08.2019ರ ವರೆಗೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂಭ್ರಮದಿಂದ ಆಚರಿಸಲಾಯಿತು.

ಹಾಗೆಯೇ **ಒರಿಸ್ಸಾದ ಬರುನೈಲ್ ಖೋರ್ದಾ** ದಲ್ಲಿ **(Khorda)** ದಿನಾಂಕ: 01.12.2019 ರಿಂದ 07.12.2019ರ ವರೆಗೆ

ರೋವರ್ಸ್–ರೇಂಜರ್ಸ್‌ಗಳ **"ಮಿನಿಜಾಂಬೋರಿ"**ಯನ್ನು ಏರ್ಪಡಿಸಿ **"ರೇಂಜರ್ ಶತಮಾನೋತ್ಸವ"**ವನ್ನು ಅತ್ಯಂತ ಯಶಸ್ವಿಯಾಗಿ ಆಚರಿಸಲಾಯಿತು. ಕರ್ನಾಟಕದಲ್ಲಿ ದಿನಾಂಕ: 07.09.2019ರಂದು ಉಡುಪಿಯ **"ಮಿಲ್‌ಗ್ರೀಸ್"** ಕಾಲೇಜಿನಲ್ಲಿ ರೇಂಜರ್ಸ್ ಶತಮಾನೋತ್ಸವವನ್ನು ವಿಶೇಷವಾಗಿ ಆಚರಿಸಿದ್ದು, ಈ ಆಚರಣೆಯ ಕಾರ್ಯಕ್ರಮವನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡುವಂತಹದ್ದಾಗಿದೆ.

ಕರ್ನಾಟಕ ರಾಜ್ಯದ ಉನ್ನತ ಕಾಲೇಜು ಶಿಕ್ಷಣ ಮತ್ತು ಪದವಿ ಪೂರ್ವ ಶಿಕ್ಷಣ ಇಲಾಖೆಗಳಿಂದ ಸಂಪೂರ್ಣ ಸಹಕಾರ, ಆದೇಶ, ಮಾರ್ಗದರ್ಶನ ನೀಡಲು ನೋಡಲ್ ಅಧಿಕಾರಿಗಳನ್ನು ನಿಯೋಜಿಸಲಾಗಿದ್ದು, ಈ ಸಂಸ್ಥೆಯು ಬೆಳವಣಿಗೆಗೆ ಪ್ರೋತ್ಸಾಹದಾಯಕವಾಗಿದೆ. ಉನ್ನತ ಶಿಕ್ಷಣದಲ್ಲಿ, ಉದ್ಯೋಗದಲ್ಲಿ ರೋವರ್ಸ್–ರೇಂಜರ್ಸ್‌ಗಳಿಗೆ ಪ್ರಾಮುಖ್ಯತೆ ಲಭಿಸುತ್ತಿದೆ ಎಂಬುದು ಹರ್ಷವೆನಿಸುತ್ತಿದೆ.

ಈ ವರ್ಷ ನಮಗೆ ಭಾಗ್ಯದ ಬಾಗಿಲು ತೆರೆದ ಸ್ವಾತಂತ್ರ್ಯ ಜ್ಯೋತಿಗೆ ನಾಂದಿಯಾದ, ಬ್ರಿಟಿಷರ ಬಿಗಿಮುಷ್ಠಿಯಿಂದ ಬಿಡುಗಡೆಗೆ ಹೋರಾಟ ಮಾಡಿದ, ರಾಷ್ಟ್ರಪಿತ ಹಾಗೂ ನೇತಾರ, ಪೂಜ್ಯ "ಬಾಪೂ"ರವರ 150ನೇ ಜನ್ಮ ದಿನಾಚರಣೆಯು **"ಹರ್ಷದ, ಹೊನಲ ಹಬ್ಬವಾಗಿದೆ"**. ಮಹಾತ್ಮ ಗಾಂಧಿಜೀಯವರ ಈ ಜನ್ಮ ದಿನಾಚರಣೆಯು ಈ ವರ್ಷದ ರೇಂಜರ್ಸ್‌ಗಳ ಶತಮಾನೋತ್ಸವಕ್ಕೆ ಹೊಸಕಳೆ, ಸಡಗರ, ಅತ್ಯುತ್ಸಾಹ ಸಂಭ್ರಮದ ಸಿರಿಯನ್ನು ಮುಡಿಗೇರಿಸಿದೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಸ್ಫೂರ್ತಿಯಗರಿ ಮೂಡಿದೆ. **"ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ"** ಎಂಬ ಬಾಪೂಜಿಯವರ ಸಂದೇಶದಂತೆ, ಅವರ ಆದರ್ಶದ ನೆರಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮಕ್ಕಳು, ಯುವಕರೆಲ್ಲಾ ದೇಶಭಕ್ತಿಯ ಸಿಂಚನವನ್ನು ಪಡೆದು ಭಾರತಾಂಬೆಯ ಮಡಿಲಿನ, ಮಮತೆಯ ಪ್ರಜೆಗಳಾಗಲೆಂದು ಹಾಗೂ ವಿಶ್ವಕ್ಕೆ ಮಾದರಿಯಾಗಲೆಂದು ನನ್ನ ಆಶಯ.

ಒಂದು ಸಂಸ್ಥೆಯು ಜಗತ್ತಿನಾದ್ಯಂತ ಶತಮಾನವನ್ನು ಪೂರೈಸುತ್ತಿರುವುದು ಪ್ರಶಂಸನೀಯ! ಸತ್ವಯುತ, ಪ್ರಗತಿಪರ, ಆದರ್ಶಪೂರಿತ, ಸದುದ್ದೇಶ ಹೊಂದಿದ, ಸದಾಶಯವನ್ನು ಹೊತ್ತ, ಆರೋಗ್ಯವಂತ ಸಮಾಜವನ್ನು, ವಿಶ್ವದಾದ್ಯಂತ ರೂಪಿಸಲು ಪ್ರಯತ್ನಿಸುತ್ತಿರುವ, ಈ ಚಳವಳಿಯ ಕಾರ್ಯಕಲಾಪಗಳು ಇಂದಿಗೂ ಪ್ರೋತ್ಸಾಹದಾಯಕವೆಂಬುದರಲ್ಲಿ ಸಂದೇಹವಿಲ್ಲ. ಈ ರೇಂಜರ್ಸ್‌ಗಳ ಶತಮಾನೋತ್ಸವವು ಯುವಜನತೆಯ ಮನ, ಮನೆ, ವಿಶ್ವವನ್ನು ಗೆಲ್ಲಲು ಸಹಕಾರಿಯಾಗಲಿ, ಮಾದರಿಯಾಗಲಿ ಎಂಬುದು ನನ್ನ ಸದಾಶಯ.

**"ರೇಂಜರ್ ಶತಮಾನೋತ್ಸವಕ್ಕೆ ಶುಭವಾಗಲಿ,"**

---

## ಶ್ರೀವಾಣಿ

ಮನುಷ್ಯ ತಪ್ಪನ್ನು ಮಾಡುತ್ತಾನೆ. ಅದು ಸಹಜವಾದುದು. ಆದರೆ ಹಲವರ ಜೀವನದಲ್ಲಿ ಕಾಣುವ ವೈಶಿಷ್ಟ್ಯವೆಂದರೆ ಅವರು ಮಾಡಿದ ತಪ್ಪನ್ನು ಮುಚ್ಚುವುದಿಲ್ಲ. ಅವರು ಜೀವನದಲ್ಲಿ ಮೇಲೆದ್ದು ಬುದ್ಧರಾಗುತ್ತಾರೆ. ಆದರೆ ನಾವು ನಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವುದು ಅಗೌರವ ಎಂದು ಭಾವಿಸಿ ಪಾತಾಳಕ್ಕೆ ಬೀಳುತ್ತೇವೆ ಹಾಗು ನಾವು ಮೇಲೇಳುವುದಿಲ್ಲ.

**– ಡಾ. ಶ್ರೀಶ್ರೀ ಶಿವಕುಮಾರ ಸ್ವಾಮೀಜಿಯವರು**

◆ ◆ ◆

ಸ್ವಾತಂತ್ರ್ಯಾನಂತರದಲ್ಲಿ ಸ್ಕೌಟ್ ಚಳವಳಿಯು ನಮ್ಮ ದೇಶದಲ್ಲಿ ಜನಾನುರಾಗಿಯೂ ಬೆಳೆಯುತ್ತಾ ಬಂದಿದೆ. ಬಾಲಕ, ಬಾಲಕಿಯರಿಗೆ ಸಚ್ಚಾರಿತ್ರ್ಯ ನಿರ್ಮಾಣದಲ್ಲಿ ಶಿಕ್ಷಣ ನೀಡುತ್ತದೆ. ಸದೃಢರಾಗಿ, ಶಿಸ್ತುಗಾರರಾಗಿ, ಸಮಾಜೋಪಯೋಗಿ ವ್ಯಕ್ತಿಗಳಾಗಿ ಬಾಳುವಂತೆ ತರಬೇತಿ ನೀಡುವ ಚಳವಳಿಯಾಗಿದೆ. ಸ್ಕೌಟ್ಸ್/ಗೈಡ್ಸ್‌ಗಳು ನಿಯಮವನ್ನು ನೆನಪಿನಲ್ಲಿಟ್ಟುಕೊಂಡು, ತಮ್ಮ ಕರ್ತವ್ಯ ಪಾಲನೆಯಲ್ಲಿ ನಿರತರಾಗಲೆಂದು ಆಶಿಸುತ್ತೇನೆ. ರಾಷ್ಟ್ರದ ಶಾಂತಿದೂತರಾಗಿ ಬಾಳಲೆಂದು ಆಶಿಸುತ್ತೇನೆ.

**– ಶ್ರೀ ಜಯಚಾಮರಾಜೇಂದ್ರ ಒಡೆಯರ್**

◆ ◆ ◆

ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟೂ ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.

**– ಜವಾಹರಲಾಲ್ ನೆಹರು**

# ಬರೀ ರಾಜ ಅಲ್ಲ ಈ ರಾಜ!



ಜಯಚಾಮರಾಜೇಂದ್ರ ಒಡೆಯರ್ ಅವರು ಮೈಸೂರಿನ ಯದುವಂಶದ ಕೊನೆಯ ಮಹಾರಾಜರು ಅವರ ಜನ್ಮಶತಾಬ್ದಿಯ ಆಚರಣೆ ಪ್ರಸಕ್ತ ವರ್ಷ ಜುಲೈ 18ರಂದೇ ಆರಂಭವಾಗಬೇಕಿತ್ತು. ಜಯಚಾಮರಾಜ ಒಡೆಯರ್ ಈ ನಾಡಿನ ಸಾಹಿತ್ಯ, ಸಂಸ್ಕೃತಿ, ಸಂಗೀತ, ಕಲೆಗೆ ಅಪಾರ ಕೊಡುಗೆ ನೀಡಿದವರು. ಆಶ್ರಿತ ಸಂಸ್ಥಾನಗಳಲ್ಲೇ ಪ್ರಜಾಪ್ರಭುತ್ವಕ್ಕೆ ಮೊಟ್ಟಮೊದಲು ಒಪ್ಪಿಗೆ ಕೊಟ್ಟರು. "ನನ್ನ ರಾಜ ಪದವಿ ಹೋದರೂ ಚಿಂತೆಯಿಲ್ಲ ಕರ್ನಾಟಕ ಏಕೀಕರಣವಾಗಲಿ" ಎಂದು ಘೋಷಿಸಿದವರು. ಅವರ ಸ್ಮರಣೆಗಾಗಿ ಈ ನುಡಿ ಚಿತ್ರ.

ವಿಶ್ವದೆಲ್ಲೆಡೆ ಆಗಷ್ಟೇ ಎರಡನೇ ಮಹಾಯುದ್ಧ ಆರಂಭವಾಗಿತ್ತು. (1939–1945) ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಉತ್ತುಂಗ ಸ್ಥಿತಿಯಲ್ಲಿತ್ತು. ಇಂತಹ ಸನ್ನಿವೇಶದಲ್ಲಿ ಮೈಸೂರು ಸಂಸ್ಥಾನದ 25ನೇ ಮಹಾರಾಜರಾಗಿ ಜಯಚಾಮರಾಜೇಂದ್ರ ಒಡೆಯರ್ 1940 ಸೆಪ್ಟೆಂಬರ್ 8 ರಂದು ಪಟ್ಟಾಭಿಷೇಕಗೊಂಡರು. ಅಧಿಕಾರಕ್ಕೆ ಬರುತ್ತಿದ್ದಂತೆಯೇ ಅವರು ಮೊದಲು ಕೈಗೊಂಡ ಕಾರ್ಯವೇ ಪ್ರಜಾಪರಿಷತ್ತಿನ ರಚನೆ. ಆ ಮೂಲಕ ಜನರಿಂದಲೇ ಆಡಳಿತ ಆರಂಭಿಸಿದ ಮೊದಲ ರಾಜ ಎಂಬ ಹೆಗ್ಗಳಿಕೆ ಪಾತ್ರರಾದವರು ಶ್ರೀ ಜಯಚಾಮರಾಜೇಂದ್ರ ಒಡೆಯರ್.

ಅಷ್ಟೇ ಅಲ್ಲ, ಜನರಿಗೆ ಮತ್ತಷ್ಟು ಅಧಿಕಾರವನ್ನು ನೀಡಬೇಕೆಂಬ ಹಂಬಲದಿಂದ ರಾಜಕೀಯ ಸುಧಾರಣೆಗೂ ಮುಂದಾದರು. ವಿಧಾನ ಪರಿಷತ್ ಮತ್ತು ಪ್ರಜಾಪ್ರತಿನಿಧಿ ಸಭೆಗಳಿಗೆ ಜನರಿಂದಲೇ ಪ್ರತಿನಿಧಿಗಳನ್ನು ಚುನಾವಣೆ ಮೂಲಕ ಆಯ್ಕೆ ಮಾಡುವ ಕಾಯ್ದೆಯನ್ನು 1941 ರಲ್ಲಿ ಜಾರಿಗೊಳಿಸಿದರು. ಗ್ರಾಮಗಳ ಅಭಿವೃದ್ಧಿಗಾಗಿ 1942 ರಲ್ಲಿ ದೇಶದಲ್ಲಿಯೇ ಮೊದಲ ಬಾರಿಗೆ ಪಂಚಾಯತ್‌ರಾಜ್ ಮತ್ತು ಗ್ರಾಮೀಣಾಭಿವೃದ್ಧಿ ಪಂಚವಾರ್ಷಿಕ ಯೋಜನೆಯನ್ನು ಅನುಷ್ಠಾನಗೊಳಿಸಿದ್ದು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರ ದೂರದೃಷ್ಟಿಗೆ ಕನ್ನಡಿ. ಇದನ್ನೇ ಮಾದರಿಯಾಗಿಸಿಕೊಂಡ ಭಾರತ ಸರ್ಕಾರ 1952 ರಲ್ಲಿ ಮೊದಲ ಪಂಚವಾರ್ಷಿಕ ಯೋಜನೆಯನ್ನು ದೇಶದಾದ್ಯಂತ ಜಾರಿಗೊಳಿಸಿತು.



ಮೈಸೂರು ವಿಶ್ವವಿದ್ಯಾಲಯದ ಪ್ರೊಫೆಸರ್ ಆಗಿದ್ದ ಡಾ. ಗೋಪಾಲಸ್ವಾಮಿಯವರು ತಮ್ಮ ಹವ್ಯಾಸದಿಂದ ರೇಡಿಯೋ ಕೇಂದ್ರವನ್ನು ಸ್ಥಾಪಿಸಿದರು. ಕೈಯಿಂದ ಹಣ ಹಾಕಿ ನಡೆಸುವುದು ಅವರಿಗೆ ಕಷ್ಟವಾದಾಗ 1942 ರಲ್ಲಿ ಮಹಾರಾಜರು ಅದನ್ನು ಮೈಸೂರು ಸಂಸ್ಥಾನದ ತೆಕ್ಕೆಗೆ ತೆಗೆದುಕೊಂಡು ಯಶಸ್ವಿಯಾಗಿ ನಡೆಯಲು ವ್ಯವಸ್ಥೆ ಮಾಡಿದರು ಮುಂದೆ ಅದು ಡಾ. ನಾ. ಕಸ್ತೂರಿಯವರ ಮೇಲ್ವಿಚಾರಣೆಯಲ್ಲಿ ಆಕಾಶವಾಣಿ ಎಂಬ ಹೆಸರು ಪಡೆಯಿತು.

ತಾಂತ್ರಿಕ ಶಿಕ್ಷಣದ ಮಹತ್ವ ಅರಿತಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬೆಂಗಳೂರು, ಮೈಸೂರು ನಗರಗಳಲ್ಲಿ ಡಿಪ್ಲೋಮಾ, ಎಂಜನಿರಿಂಗ್ ಶಿಕ್ಷಣ ಆರಂಭಿಸಿದರು. ಆಯುರ್ವೇದ, ಯುನಾನಿ ಚಿಕಿತ್ಸಾ ಪದ್ಧತಿಗಳನ್ನು ಪೋಷಿಸಿದರು. ಜೈಲುಕೈದಿಗಳ ಪುನರ್‌ವಸತಿಗಾಗಿ ಬಂಧಮುಕ್ತರ ಸೊಸೈಟಿ ರಚಿಸಿದರು.

ಸಮಾಜಮುಖಿ ಚಿಂತನೆಗಳಿಂದ ಸದಾ ತುಡಿಯುತ್ತಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ಗೋಹತ್ಯೆ ನಿಷೇಧ, ಕೂಲಿಕಾರ್ಮಿಕರಿಗೆ ಅಪಘಾತ ಪರಿಹಾರ, ಮಹಿಳೆಯರಿಗೆ ಆಡಳಿತದಲ್ಲಿ ಆದ್ಯತೆ ಮೊದಲಾದ ಸಾಮಾಜಿಕ ಸುಧಾರಣೆಗಳನ್ನು ಜಾರಿಗೆ ತಂದರು.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಆರಂಭಗೊಂಡ ಶರಾವತಿ ನದಿಯ ಜೋಗ ಜಲವಿದ್ಯುತ್ ಯೋಜನೆಯನ್ನು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಪೂರ್ಣಗೊಳಿಸಿದರು.

ಏಳು ವರ್ಷಗಳ ತಮ್ಮ ಅರಸೊತ್ತಿಗೆಯಲ್ಲಿ ಮಹತ್ತರ ಸಾಧನೆ ಮಾಡಿದ ತೃಪ್ತಿಯೊಂದಿಗೇ ಭಾರತ ಸ್ವಾತಂತ್ರ್ಯಕ್ಕೆ ಮುನ್ನವೇ 1947ರ ಅಗಸ್ಟ್ 9ರಂದು ಮೈಸೂರು ರಾಜಸಂಸ್ಥಾನವನ್ನು ಭಾರತದ ಒಕ್ಕೂಟದಲ್ಲಿ ವಿಲೀನಗೊಳಿಸಲು ಮೊದಲಿಗೆ ಒಪ್ಪಿ ಅಂಕಿತ ಹಾಕಿದರು. ತದನಂತರ ಸ್ವತಂತ್ರ ಭಾರತದಲ್ಲಿ ರಾಜಪ್ರಮುಖರಾಗಿ ಮುಂದುವರೆದ ಒಡೆಯರ್ ಮೈಸೂರು ರಾಜ್ಯದ ಮೊದಲ ರಾಜ್ಯಪಾಲರಾದರು(1956–1964) ಬಳಿಕ 1966 ರವರೆಗೆ ಮದ್ರಾಸು ಪ್ರಾಂತ್ಯದ ರಾಜ್ಯಪಾಲರಾಗಿದ್ದರು. ಕರ್ನಾಟಕದ ಏಕೀಕರಣಕ್ಕಾಗಿ ಎಲ್ಲರೊಂದಿಗೆ ಶ್ರಮಿಸಿ ರತ್ನಸಿಂಹಾಸನದಿಂದ ನಿರ್ಗಮಿಸಿ ಕರುನಾಡ ಜನರ ಮನಮಂದಿರ ದಲ್ಲಿ ಮನೆ ಮಾಡಿದರು.

ಮೈಸೂರು ದಸರಾ ಎಷ್ಟೊಂದು ಸುಂದರ ಎನ್ನುವ ಮಾತನ್ನು ಅಕ್ಷರಶಃ ವೈಭವಪೂರಿತವಾಗಿ ಮಾಡಿದವರು ಯದುವಂಶ ಕುಲತಿಲಕ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಅವರು ಸಂಸ್ಕೃತ, ಹಿಂದಿ ವಿಷಯದಲ್ಲಿ ವಿಶೇಷ ಆಸಕ್ತಿ ಹೊಂದಿದ್ದ ಶ್ರೀ ಜಯಚಾಮರಾಜರು ಋಗ್ವೇದವನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಲು ಪ್ರೋತ್ಸಾಹಿಸಿದರು.

ಅಸ್ಪೃಶ್ಯತೆ ನಿವಾರಣೆಗಾಗಿ ದಲಿತರಿಗೆ ದೇವಾಲಯ ಪ್ರವೇಶಕ್ಕೆ ಅವಕಾಶ ಕಲ್ಪಿಸಿದರು. ಮೇಲಾಗಿ ಆರ್ಥಿಕ ಅಭಿವೃದ್ಧಿಗೆ ಮುಂದಾಗಿ ನಿರ್ಗತಿಕರಿಗೆ ಭೂಮಿ ನೀಡಿದರು. ರೈತಪರ ಕಾಳಜಿ ಹೊಂದಿದ್ದು, ನುಸಿರೋಗ ಸಂಶೋಧನೆಗಾಗಿ ಮಂಡ್ಯದಲ್ಲಿ ಲ್ಯಾಬೋರೇಟರಿ ಸ್ಥಾಪಿಸಿದರು.

ಮೈಸೂರು ಅರಮನೆ ಕೋಟೆಯೊಳಗೆ ಕನ್ನಡ ಪ್ರೇಮದ ಪ್ರತೀಕವಾಗಿ ನಾಡದೇವತೆ ಭುವನೇಶ್ವರಿದೇವಿ ದೇವಾಲಯ, ಋಗ್ವೇದದಿಂದ ಪ್ರೇರಿತರಾಗಿ ಗಾಯಿತ್ರಿ ದೇವಸ್ಥಾನವನ್ನು ಶ್ರೀ ಜಯಚಾಮರಾಜರು ಕಟ್ಟಿಸಿದರು. ತಂತ್ರಶಾಸ್ತ್ರದಲ್ಲಿ ನಿಪುಣರಾಗಿದ್ದ ಅವರು ಅದರಿಂದ ಪ್ರಭಾವಿತರಾಗಿ ನೇಪಾಳದ ಕಾಮಾಕ್ಯದೇವಿ ದೇವಸ್ಥಾನಕ್ಕೆ ಭೇಟಿ ನೀಡಿ ದೇವಾಲಯದ ತದ್ರೂಪವನ್ನು ಮೈಸೂರಿನ ರಾಮಾನುಜ ರಸ್ತೆಯಲ್ಲಿ "ಕಾಮಕಾಮೇಶ್ವರಿ ದೇವಾಲಯದ" ಹೆಸರಿನಲ್ಲಿ ನಿರ್ಮಿಸಿದರು.

ರಾಷ್ಟ್ರಕವಿ ಕುವೆಂಪು ಭಾವುಕರಾಗಿ "ಎಲ್ಲರೂ ಸಿಂಹಾಸನಾಧೀಶರಾಗಿ ಮಹಾರಾಜರಾದರೆ ಇವರು ಸಿಂಹಾಸನ ತ್ಯಜಿಸಿಯೇ ಮಹಾರಾಜರಾದರು" ಎಂದು ಉದ್ಗರಿಸಿದ್ದರು. ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ಮಹಾರಾಜರಾಗಿ, ರಾಜ್ಯಪಾಲರಾಗಿದ್ದು ಮಾತ್ರವಲ್ಲದೆ ಭಾರತೀಯ ಸಾಂಸ್ಕೃತಿಕ ರಾಯಭಾರಿಯಾಗಿ ಭಾರತ ಸರ್ಕಾರದಿಂದ ನೇಮಕಗೊಂಡರು.

ರಾಜತ್ವ ಅನುಭವಿಸಿ ಪ್ರಜಾಪ್ರಭುತ್ವಕ್ಕೆ ಅಧಿಕಾರ ಹಸ್ತಾಂತರಿಸಿ ರಾಜತ್ವ–ಪ್ರಜಾಪ್ರಭುತ್ವದ ಕೊಂಡಿಯಾಗಿ ಕಾಲಕಾಲಕ್ಕೆ ರಾಜಕೀಯ, ಆಡಳಿತದಲ್ಲಿ ಸುಧಾರಣೆ ತಂದು ಮಾದರಿ ಮೈಸೂರು ರಾಜ್ಯದಿಂದ ಆದರ್ಶ ಕರ್ನಾಟಕ ರಾಜ್ಯಕ್ಕೆ ಅಗ್ರಪಂಕ್ತಿ ಹಾಕಿಕೊಟ್ಟ ಶ್ರೀ ಜಯಚಾಮರಾಜೇಂದ್ರ ಒಡೆಯರ್ ತಮ್ಮ 55ನೇ ವಯಸ್ಸಿನಲ್ಲಿ ಬೆಂಗಳೂರು ಅರಮನೆಯಲ್ಲಿ ವಿಧಿವಶವಾದರು. ಅವರ ಜನ್ಮ ಶತಮಾನೋತ್ಸವದ ಹೊಸ್ತಿಲನಲ್ಲಿರುವ (2019) ಈ ಶುಭ ಸಂದರ್ಭದಲ್ಲಿ ವರ್ಷಪೂರ್ತಿ ಅವರ ವರ್ಧಂತಿ ನಡೆಯಲಿ; ಈ ರಾಜಯೋಗಿಯ ಆದರ್ಶ, ಗುಣ, ನಡತೆಗಳನ್ನು ಜನರು ಅರಿಯುವಂತಾಗಲಿ.

◆

# ಕರ್ನಾಟಕ ರಾಜ್ಯ ಜಾಂಬೋರೇಟ್‌ಗಳು



◆ ರಾ. ಚಂದ್ರಶೇಖರನ್, ಎಲ್.ಟಿ. (ಕಬ್)
28ನೇ ರಾಜ್ಯ ಜಾಂಬೋರೇಟ್ ಮುಖ್ಯಸ್ಥರು
ಉಪಾಧ್ಯಕ್ಷರು, ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆ

1) ಜಾಂಬೋರಿ – ಜಾಂಬೋರೇಟ್ ಪದಗಳ ಶಬ್ದಾರ್ಥ

ಜಾಂಬೋರಿ ಎಂದರೇನು?

ಸ್ಕೌಟ್ ಸಂಸ್ಥೆಯ ಸಂಸ್ಥಾಪಕ ಬಿ.ಪಿ.ರವರು ಕಾರಣರಾಗಿ, ಶಬ್ದಾರ್ಥ ಕೋಶಕ್ಕೆ ಸೇರಿದ ಹಲವಾರು ಪದಗಳಲ್ಲಿ, ಪ್ರಸ್ತುತ ಅರ್ಥದಲ್ಲಿ ಜಾಂಬೋರಿ ಪದವೂ ಒಂದು. 1872 ರಷ್ಟು ಹಿಂದೆಯೇ ಈ ಶಬ್ದವು ಶಬ್ದಕೋಶದಲ್ಲಿ ಕಂಡುಬರುವುದಾದರೂ, ಅದು "ಸದ್ದುಗದ್ದಲದಿಂದ ಕೂಡಿದ ಲೋಲುಪ್ತಿಯ ಬೃಹತ್‌ಕೂಟ" ಎಂಬ ಅರ್ಥಕ್ಕೆ ಸೀಮಿತವಾಗಿದ್ದಿತು. 1920 ರಿಂದ ಈಚೆಗೆ ಆ ಪದಕ್ಕೆ ಸ್ಕೌಟ್–ಗೈಡ್ ಬೃಹತ್ ಸಮಾವೇಶ ಎಂಬ ಅರ್ಥವು ಸೇರಿಕೊಂಡಿತು. ಬಿ.ಪಿ. ಅವರ ಆಫ್ರಿಕಾದ ಸೈನ್ಯ ಜೀವನದ ಅವಧಿಯಲ್ಲಿ ಅವರ ಅನುಭವಗಳ ಆಧಾರ, ಹಲವಾರು ಹೊಸ ಪದಗಳು ಶಬ್ದಕೋಶಕ್ಕೆ ಸೇರಿದವು. ಚಾಲ್ತಿಯಲ್ಲಿದ್ದ ಹಲವಾರು ಶಬ್ದಗಳಿಗೆ ಸೀಮಿತ ಅರ್ಥವು ಬದಲಾಯಿತು. ಹಾಗೆ ಬದಲಾದ ಅರ್ಥದಿಂದ ಮೆರೆಯುತ್ತಿರುವ ಜಾಂಬೋರಿ ಪದಕ್ಕೆ ಬಿ.ಪಿ. ಕಾರಣರಾದರು.

1920ರ "ಒಲಂಪಿಯ" ಅಂತಾರಾಷ್ಟ್ರೀಯ ಸಮಾವೇಶದ ವೇಳೆ ಸ್ಕೌಟುಗಳ (ಮುಂದಿನ ದಿನಗಳಲ್ಲಿ ಗೈಡುಗಳೂ ಸೇರಿದಂತೆ) ಬೃಹತ್ ಸಮಾವೇಶ ಎಂಬರ್ಥದಲ್ಲಿ ಜಾಂಬೋರಿ ಪದ ವಿಜೃಂಭಿಸಿತು, ಮುಂದುವರೆಯಿತು, ರೂಢಿಗೆ ಬಂದಿತು. ಹಾಗೆ ಪ್ರಾರಂಭವಾದ ದಿನಗಳಲ್ಲಿ ಸ್ಕೌಟಿಂಗ್ ಹಿತಾಸಕ್ತರೊಬ್ಬರು, ಜಾಂಬೋರಿ ಪದವನ್ನು ಹೇಗೆ ವಿವರಿಸುತ್ತೀರಿ? ಎಂದು ಕೇಳಲಾಗಿ, "ಕ್ರಿಯಾಶೀಲವಾಗಿ ಅಡಚಣೆ ಇಲ್ಲದೆ ಕೆಲಸ ಮಾಡಲು ಅನುಕೂಲವಾಗುವ ಮೊಣಕಾಲವರೆಗಿನ ಷಾರ್ಟ್ಸ್, ಕೊರಳಿಗೆ ಕಂಠವಸ್ತ್ರ ಧರಿಸಿ, ಕೈಯಲ್ಲಿ ದಂಡ ಹಿಡಿದು, ಮುಖದಲ್ಲಿ ಕಿವಿಯಿಂದ ಕಿವಿಯುವರೆಗಿನ ನಗುವನ್ನು ಮೈಗೂಡಿಸಿಕೊಂಡು ತಲೆಯ ಮೇಲೆ ಅಗಲದಂಚಿನ ಹ್ಯಾಟ್‌ನು ಅಲಂಕರಿಸಿಕೊಂಡು ಉಲ್ಲಾಸಭರಿತರಾಗಿ ನಲಿಯುವ ಬಾಲಕರ ಸಮಾವೇಶವೇ ಜಾಂಬೋರಿ" ಎಂದು ಬಿ.ಪಿ. ಉತ್ತರಿಸಿದರು.

1920ರ ಈ ವಿವರಣೆ, ಕಾಲಕಳೆದಂತೆ, ವಿಶಾಲಗೊಳ್ಳುತ್ತಾ ಹೋಗಿ, ಇಂದು ಜಾಂಬೋರಿ ಎಂದಕೂಡಲೇ ಸಾವಿರಾರು ಸ್ಕೌಟ್–ಗೈಡ್‌ಗಳು ಒಂದೆಡೆ ಸೇರಿರುವ ಬೃಹತ್ ಚಿತ್ರಣವು ಕಣ್ಮುಂದೆ ಹಾಯುತ್ತದೆ. ಕನ್ನಡದಲ್ಲಿ ಸಹ ಹಲವು ಪದಗಳ ಅರ್ಥ ಸಮನ್ವಯದಲ್ಲಿ ಈ ಪದವನ್ನು ಕಾಣುತ್ತೇವೆ. ಉದಾ:– ಜಂಬೂ ಸವಾರಿ ಪದದ ಜಂಬೂರಿ.

ಜಂಬ=ಆಡಂಬರ, ವೈಭವೋಪೇತ
ಭೂರಿ=ಅಮಿತವಾದ, ಸ್ವರ್ಣಸದೃಶವಾದ
ಅರ್ಥಗಳನ್ನು ಕೂಡಿಸಿದರೆ ಜಂಬ+ಭೂರಿ=ಜಂಬೂರಿ ಆಯಿತು.

ಸ್ವರ್ಣಸದೃಶ, ವೈಭವದಿಂದ ಕೂಡಿದ ಸ್ಕೌಟ್–ಗೈಡ್‌ಗಳ ಬೃಹತ್ ರೀತಿಯ ಸಮಾವೇಶ / ಉತ್ಸವ ಎಂದು ಅರ್ಥೈಸಬಹುದಲ್ಲವೇ? ಹಾಗಾಗಿ ಕಾಲಕ್ರಮದಲ್ಲಿ "ಜಂಬೂರಿ" ಮತ್ತು "ಜಂಭೂರಿ" ಪದಗಳು "ಜಾಂಬೋರಿ" ಎಂದಾಯಿತು ಎನ್ನಲು ಬರುತ್ತದೆ. ಇತ್ತೀಚಿನ ದಿನಗಳಲ್ಲಿ ಅಂತಾರಾಷ್ಟ್ರೀಯ, ರಾಷ್ಟ್ರೀಯ ಸ್ತರಗಳಲ್ಲಿ "ಜಾಂಬೋರಿ" ಎಂದೂ, ರಾಜ್ಯ ಮಟ್ಟದಲ್ಲಿ "ಜಾಂಬೋರೇಟ್" ಎಂದೂ ರೂಢಿಗೆ ಬಂದಿದೆ.

## ಕರ್ನಾಟಕದಲ್ಲಿ ಜಾಂಬೋರಿ, ಜಾಂಬೋರೇಟ್‌ಗಳು

1. **ಪ್ರಸ್ತಾವನೆ** : ಕರ್ನಾಟಕದ ದಕ್ಷಿಣ ಭಾಗ–ಮೈಸೂರು ಸಂಸ್ಥಾನಕ್ಕೆ ಸೀಮಿತವಾಗಿದ್ದ ರಾಜ್ಯದ 2 ಸಮಾವೇಶಗಳನ್ನು "ಮೈಸೂರು ರಾಜ್ಯ ರ್‍ಯಾಲಿ" ಎಂದು ಕರೆಯುತ್ತಿದ್ದರು.
2. 1956ರಲ್ಲಿ "ವಿಶಾಲ ಮೈಸೂರು ರಾಜ್ಯ" ಅಸ್ತಿತ್ವಕ್ಕೆ ಬರುವುದರಲ್ಲಿತ್ತು. ಭಾರತ್ ಸ್ಕೌಟ್ಸ್–ಗೈಡ್ಸ್, ಕರ್ನಾಟಕ

(ಆಗ ಮೈಸೂರು) ಅಸ್ತಿತ್ವಕ್ಕೆ ಬಂದಾಗಿತ್ತು. ಹಾಗಾಗಿ ಅದನ್ನು "10ನೆಯ ಮೈಸೂರು ಸ್ಟೇಟ್ ಜಾಂಬೋರಿ" ಎಂದು ಕರೆಯಲಾಗಿತ್ತು.

3. ಅಲ್ಲಿಂದೀಚೆಗೆ "ಕರ್ನಾಟಕ" ಎಂಬ ಹೆಸರು ರೂಢಿಗೆ ಬಂದ ಮೇಲೆ ನಡೆದ ಸಮಾವೇಶಗಳು ರಾಜ್ಯ ಜಾಂಬೋರೇಟ್ ಎಂದು ಕರೆಯಲ್ಪಟ್ಟಿವೆ. ಆ ವೇಳೆಗೆ ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಸಮಾವೇಶಗಳು ಬೃಹದ್ಗಾತ್ರದವುಗಳಾಗಿದ್ದು, "ಜಾಂಬೋರಿ"ಗಳೆಂದ, ರಾಜ್ಯ ಮಟ್ಟದ ಸಮಾವೇಶಗಳು ಸಂಖ್ಯಾ ರೀತಿಯಲ್ಲಿ, ಅಷ್ಟು ಬೃಹತ್ ಅಲ್ಲದ ಕಾರಣ "ಜಾಂಬೋರೇಟ್"ಗಳಾಗಿ, ಒಂದು ರೀತಿಯ ಅಲಿಖಿತ ಒಡಂಬಡಿಕೆಯೋ ಎಂಬಂತೆ ರೂಢಿಗೆ ಬಂದಿದೆ.

4. **ಸ್ಮರಣೆ :** ಈ ಲೇಖನವನ್ನು ಬರೆಯುವ ಜವಾಬ್ದಾರಿ, ಒಂದು ರೀತಿಯ ಅಂಧಮಯ ಸನ್ನಿವೇಶದ ತಿಳುವಳಿಕೆ ಆಗಿತ್ತು. ಮಾಹಿತಿಗಾಗಿ ವಾರ್ಷಿಕ ವರದಿಗಳು, ಸ್ಮರಣ ಸಂಚಿಕೆಗಳನ್ನು ಪರಾಮರ್ಶಿಸಲಾಗುತ್ತಿದ್ದಾಗ ಹುಡುಕಾಟ, ಸಂಗ್ರಹ ಕಾರ್ಯವು ಮುಂದುವರೆದಂತೆ, ವಿಷಯದ ಬಗ್ಗೆ ಬೆಳಕು ಮೂಡಿತು. ಬಹಳ ವರ್ಷಗಳು ರಾಜ್ಯದ ತರಬೇತಿ ವಿಭಾಗದ ಆಯುಕ್ತರೂ, ತರಬೇತಿ ತಂಡದ ಮುಖ್ಯಸ್ಥರೂ ಆಗಿದ್ದ ಡಾ॥ ಎಸ್.ಬಿ. ಕೌಶಿಕ್ ಅವರು 1985ರ ಜಾಂಬೋರಿ ಸ್ಮರಣ ಸಂಚಿಕೆಗಾಗಿ ಬರೆದ ಲೇಖನವು ದೊರಕಿ, ನನ್ನ ಲೇಖನಕ್ಕೆ ಹೊಂಬೆಳಕು ಚೆಲ್ಲಿ, ಮಾಹಿತಿಯ ನೆಲೆಗಟ್ಟು ನೀಡಿ, ಬರವಣಿಗೆಗೆ ಸ್ಫೂರ್ತಿಯಿತ್ತು ಮೆರಗು ನೀಡಿತು. ನನ್ನ ಮೂರು ವುಡ್‌ಬ್ಯಾಡ್ಜ್ ಶಿಬಿರಗಳ (ಕಬ್/ಸ್ಕೌಟ್/ರೋವರ್) "ಶಿಬಿರ ನಾಯಕ"ರಾಗಿ, ನನ್ನ ಹಿತಾಸಕ್ತರಲ್ಲೊಬ್ಬರಾಗಿದ್ದ ಡಾ॥ ಕೌಶಿಕ್ ಅವರನ್ನು ಶ್ರದ್ಧೆ ಮತ್ತು ಕೃತಜ್ಞತೆಗಳಿಂದ ಸ್ಮರಿಸುತ್ತೇನೆ.

5. ಕರ್ನಾಟಕದಲ್ಲಿ ಈವರೆಗೆ 27 ಜಾಂಬೋರೇಟ್‌ಗಳು ನಡೆದಿವೆ. ಇದೀಗ 28ನೇ ರಾಜ್ಯ ಜಾಂಬೋರೇಟ್‌ಗೆ ಸಿದ್ಧತೆ ಭರದಿಂದ ಸಾಗಿದೆ. ಆ ಜಾಂಬೋರೇಟ್‌ನ ಸ್ಮರಣ ಸಂಚಿಕೆ ಗಾಗಿ ಈ ಲೇಖನ ಮೂಡಿಬಂದಿದೆ.

6. ಕಳೆದ ಶತಮಾನ ಮೊದಲ ದಶಕದ ಉತ್ತರಾರ್ಧದಲ್ಲಿ ಕನ್ನಡ ನೆಲದಲ್ಲಿ 1909ರಲ್ಲಿ ಸ್ಕೌಟಿಂಗ್ ಪ್ರಾರಂಭವಾದದ್ದು ಚಾರಿತ್ರಿಕ ದೃಷ್ಟಿ. ಅದೇ ಶತಮಾನದ ಎರಡನೆಯ ದಶಕದ ಉತ್ತರಾರ್ಧದಲ್ಲಿ, ಸರ್ವರಿಗೂ ಮುಕ್ತವಾಗಿ, 1917–18ರಲ್ಲಿ ಸ್ಕೌಟಿಂಗ್ ಪ್ರಾರಂಭವಾದದ್ದು ವ್ಯಾವಹಾರಿಕ ಹಾಗೂ ವಾಸ್ತವಿಕ ದೃಷ್ಟಿ.

7. ಹಾಗೆ ಪ್ರಾರಂಭವಾದ ಎರಡನೆಯ ವರ್ಷ 1920ರಲ್ಲಿ ಏಳು ತಿಂಗಳ ಅಂತರದಲ್ಲಿ ಎರಡು ಸ್ಟೇಟ್ ರ‍್ಯಾಲಿಗಳು ನಡೆದದ್ದು ವಿಶೇಷ.

1ನೆಯ ಸ್ಟೇಟ್ ರ‍್ಯಾಲಿ ಆಗತಾನೇ ಅಸ್ತಿತ್ವಕ್ಕೆ ಬರಲಿದ್ದ "ಕಾಫಿ" ನಾಡು ಚಿಕ್ಕಮಗಳೂರಿನಲ್ಲಿ ನಡೆಯಿತು. "ಕಾಫಿ" ಬೆಳೆ ಪ್ರಾರಂಭವಾದದ್ದು ಚಿಕ್ಕಮಗಳೂರು ಬಳಿಯ "ಬಾಬಾ ಬುಡನ್‌ಗಿರಿ" ಪರ್ವತ ಪ್ರಾಂತ್ಯದಲ್ಲಿ, ಕಾಫಿ ಪೇಯವು ಸರ್ವಮಾನ್ಯವಾದದ್ದೂ, ದಿನ ನಿತ್ಯ ಬಳಕೆಯಲ್ಲಿ ಅತ್ಯವಶ್ಯಕವೂ ಆದ ಪೇಯ. ಲವಲವಿಕೆಯಿಂದ ಕೆಲಸ ಮಾಡಲು "ಪ್ರಚೋದಕ". ಹಾಗಾಗಿ ಚಿಕ್ಕಮಗಳೂರಿನ ರಾಜ್ಯದ ಮೊದಲನೆಯ ಜಾಂಬೋರೇಟ್ (ಆಗಿನ ಸ್ಟೇಟ್ ರ‍್ಯಾಲಿ) ಸ್ಕೌಟಿಂಗ್‌ನ ಬೆಳವಣಿಗೆಗೆ ಕಾಫಿ ಪೇಯದಂತೆ ಪ್ರಚೋದಕವಾಯಿತೆನ್ನಬೇಕು.

8. ಅದೇ ವರ್ಷದ ಕೊನೆ, ಡಿಸೆಂಬರ್‌ನಲ್ಲಿ ರಾಜ್ಯದ 2ನೆಯ ಸ್ಟೇಟ್ ರ‍್ಯಾಲಿ ನಡೆದದ್ದು, ಕೋಲಾರ ಚಿನ್ನದ ಗಣಿ ಪ್ರದೇಶದ ಬಳಿಯ "ಬೌರಿಂಗ್ ಪೇಟೆ" (ಇಂದಿನ ಬಂಗಾರುಪೇಟೆ) ಯಲ್ಲಿ. ಈ ರಾಜ್ಯ ರ‍್ಯಾಲಿಯ ಪ್ರಭಾವವೇ ಇರಬೇಕು, ರಾಜ್ಯದಲ್ಲಿ ಉತ್ತಮ ಗುಣಮಟ್ಟ ಹೊಂದಿ, ಮುಂದಿನ ದಿನಗಳಲ್ಲಿ ಸ್ವರ್ಣಸದೃಶವಾಗಿ ಸಂಸ್ಥೆಯು ಬೆಳೆಯುತ್ತಿದೆ.

9. "ಬಾಯ್ ಸ್ಕೌಟ್ಸ್ ಆಫ್ ಮೈಸೂರು" ಸಂಸ್ಥೆಯ ವತಿಯಿಂದ 9 ಸ್ಟೇಟ್ ರ‍್ಯಾಲಿಗಳು ನಡೆದವು. ಪ್ರಾರಂಭದ ಬಹಳಷ್ಟು ರಾಜ್ಯ ಸ್ಕೌಟ್ ರ‍್ಯಾಲಿಗಳಲ್ಲಿ ಶ್ರೀಮದ್ಯುವರಾಜರೂ, "ಚೀಫ್ ಸ್ಕೌಟ್"ರೂ ಆಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು ಭಾಗವಹಿಸಿದ್ದರು.

10. ಭಾರತ್ ಸ್ಕೌಟ್ಸ್–ಗೈಡ್ಸ್ ಮೈಸೂರು ಸ್ಟೇಟ್ (ಮುಂದೆ ಕರ್ನಾಟಕ) ಅಸ್ತಿತ್ವಕ್ಕೆ ಬಂದ ಮೇಲೆ ಪ್ರಪ್ರಥಮ, 10ನೇ ರಾಜ್ಯ ಜಾಂಬೋರೇಟ್ 1956 ಮೇ ನಲ್ಲಿ ತುಮಕೂರಿನಲ್ಲಿ ನಡೆಯಿತು.

**ಜಾಂಬೋರಿ / ಜಾಂಬೋರೇಟ್‌ಗಳಲ್ಲಿ ಏನನ್ನು ಕಾಣುತ್ತೇವೆ? ಏನು ನಡೆಯುತ್ತದೆ ?**

ಅ) **ಪ್ರಾರಂಭದ ದಿನಗಳಲ್ಲಿ :** (1) ಸೈನ್ಯ ಮಾದರಿಯ ಧ್ವಜ ಸಮಾರಂಭಗಳು, ಗೌರವರಕ್ಷೆ, ಪಥಚಲನೆ ಮತ್ತು ಕವಾಯತು (2) ವಿವಿಧ ಸ್ಕೌಟ್ ಕೌಶಲಗಳ ಪ್ರದರ್ಶನ/

ಸ್ಪರ್ಧೆಗಳು (3) ಅಗ್ರಗಾಮಿ ಯೋಜನೆಗಳು (4) ಶಿಬಿರಾಗ್ನಿ (5) ಚಾರಣಗಳು, ಕಗ್ಗಾಡು ಜೀವನದ ದರ್ಶನ ಮತ್ತು ಕಷ್ಟ ಸಹಿಷ್ಣುತೆ (6) ಪರಸ್ಪರ ಮೈತ್ರಿಕಲಿಕೆ, ಶಿಸ್ತು ಮತ್ತು ಸಂಯಮ.

ಆ) **ಇಂದಿನ ದಿನಗಳಲ್ಲಿ ಮಕ್ಕಳ ದೃಷ್ಟಿ :** ಸ್ಪರ್ಧೆಗಳು, ಕೌಶಲ ಪ್ರದರ್ಶನ, ಚಾರಣ, ಸಾಹಸಿಕ ಚಟುವಟಿಕೆಗಳು, ಚಿತ್ರಗಳು, ನಾಣ್ಯಗಳು ಮೊದಲಾದವುಗಳ ಸಂಗ್ರಹ ಹಾಗೂ ಇತರ ಸೃಜನ ಶೀಲ ವಸ್ತುಗಳ ಪ್ರದರ್ಶನ, ತಿನಿಸುಗಳ ಅಂಕಣ, ಶಿಬಿರಾಗ್ನಿ, ಸ್ಥಳೀಯ ಚಾರಿತ್ರಿಕ, ಪ್ರೇಕ್ಷಣೀಯ ಸ್ಥಳಗಳ ಭೇಟಿ, ರಾಷ್ಟ್ರೀಯ, ಅಂತಾರಾಷ್ಟ್ರೀಯ ದಿನಾಚರಣೆಗಳು ಮತ್ತು ಅಂತರ ಜಿಲ್ಲಾ ಭೇಟಿಗಳು. **ವಯಸ್ಕನಾಯಕರ ದೃಷ್ಟಿಯಲ್ಲಿ:–** ಸ್ಕೌಟರ್/ಗೈಡರ್‌ಗಳ ಸಮಾವೇಶ ವೃಕ್ಷಮಣಿಧಾರಕರ ಸಮಾವೇಶ, ಮುಕ್ತದಳಗಳ ನಾಯಕರುಗಳ ಸಮಾವೇಶ, ಕಾರ್ಯದರ್ಶಿಗಳು ಮತ್ತು ಆಯುಕ್ತರುಗಳ ಸಮಾವೇಶ, ತರಬೇತುದಾರರ ಸಮಾವೇಶ, **ಸಾಮಾಜಿಕ ದೃಷ್ಟಿಯಿಂದ:–** ದಿನದುಪಕಾರ (ಸಮಾಜಸೇವೆ), ಪರಿಸರ ಸಂರಕ್ಷಣೆ ಕಾರ್ಯಕ್ರಮಗಳು, ಸಾಂಸ್ಕೃತಿಕ ಪ್ರದರ್ಶನಗಳು, ಭವ್ಯ ಶಿಬಿರಾಗ್ನಿ, ಉದ್ಘಾಟನೆ ಮತ್ತು ಸಮಾರೋಪ ಸಮಾರಂಭಗಳು, ಸರ್ವಧರ್ಮ ಪ್ರಾರ್ಥನೆ ಹೀಗೆ ಎಡೆತಡೆಯಿಲ್ಲದ ಕಾರ್ಯಕ್ರಮಗಳು.

ಇ) **ಪಕ್ಷಿ ನೋಟ :** ಕಣ್ಣು ಹಾಯುವಷ್ಟು ದೂರ ತಂಬುಗಳೋ ಎಲ್ಲೆಲ್ಲಿ ನೋಡಿದರೂ ಲಗುಬಗೆಯಿಂದ, ನಗುನಗುತ್ತಾ, ಓಡಾಡುವ ಸಮವಸ್ತ್ರಧಾರೀ ಮಕ್ಕಳು, ಬೃಹದಾಕಾರದ ಎಡೆಬಿಡದ ಕಾರ್ಯಕ್ರಮಗಳ ಮಹಾಪೂರ. ಇವುಗಳು ಕಣ್ಮನಗಳಿಗೆ ತಂಪುನೀಡಿ ಮುದನೀಡುತ್ತವೆ. ಸಮಾಜಹಿತ ಕಾಪಾಡುತ್ತವೆ.

ಈ) ಮೈತ್ರಿ, ಸಹಬಾಳ್ವೆ, ಸಮಾಭಾವ, ದೇಶಪ್ರೇಮ ಇವು ಉಕ್ಕಿ ಹರಿಯುತ್ತವೆ. ಈ ಅಂಶಗಳೇ ಜಾಂಬೋರೇಟ್‌ಗಳ ಪ್ರಮುಖ ಹಾಗೂ ಮೂಲ ಉದ್ದೇಶ.

9) ಕರ್ನಾಟಕ ರಾಜ್ಯ ಜಾಂಬೋರೇಟ್‌ಗಳ ಪಕ್ಷಿನೋಟ

ಅ) ಮೊದಲ ಒಂಭತ್ತು ಸ್ಟೇಟ್ ರ್‍ಯಾಲಿಗಳು

### 1ನೇ ಸ್ಟೇಟ್ ರ್‍ಯಾಲಿ - 1918

**ಸ್ಥಳ :** ಚಿಕ್ಕಮಗಳೂರು, ಕಡೂರು ಜಿಲ್ಲೆ

**ಕಾಲಾವಧಿ:** 28–4–1918ರಿಂದ 06–5–1918 (9 ದಿನಗಳು)

**ಹಾಜರಿ :** 350 ಸ್ಕೌಟುಗಳು ಭಾಗವಹಿಸಿದ್ದರು.

### 2ನೇ ಸ್ಟೇಟ್ ರ್‍ಯಾಲಿ -1920

**ಸ್ಥಳ :** ಬೌರಿಂಗ್ ಪೇಟೆ (ಈಗ ಬಂಗಾರು ಪೇಟೆ) ಕೋಲಾರ ಜಿಲ್ಲೆ

**ಕಾಲಾವಧಿ:** 28–12–1920ರಿಂದ 31–12–1920 (5 ದಿನ)

**ಹಾಜರಿ :** 500 ಸ್ಕೌಟುಗಳು ಭಾಗವಹಿಸಿದ್ದರು.

### 3ನೇ ಸ್ಟೇಟ್ ರ್‍ಯಾಲಿ - 1922-23

**ಸ್ಥಳ:** ನಂದಿ (ಕೋಲಾರಜಿಲ್ಲೆ) ಈಗ ಚಿಕ್ಕಬಳ್ಳಾಪುರ ಜಿಲ್ಲೆ

**ಕಾಲಾವಧಿ:** 30–12–1922 ರಿಂದ 02–01–1923 (4 ದಿನಗಳು)

**ಹಾಜರಿ :** 700 ಸ್ಕೌಟುಗಳು ಭಾಗವಹಿಸಿದ್ದರು.

**ವಿಶೇಷ :** ಮದ್ರಾಸು (ಚೆನ್ನೈ) ಬಾಂಬೆ (ಮುಂಬೈ) ಎಂ.ಪಿ. (ಮಧ್ಯಪ್ರದೇಶ) ಗಳಿಂದ ಸಹ ಸ್ಕೌಟುಗಳು ಬಂದಿದ್ದರು.

### 4ನೇ ಸ್ಟೇಟ್ ರ್‍ಯಾಲಿ -1926

**ಸ್ಥಳ:** ಶಿವಮೊಗ್ಗ

**ಕಾಲಾವಧಿ:** 18.4.1926 ರಿಂದ 21.04.1926 (4 ದಿನಗಳು)

**ಹಾಜರಿ :** 450 ಸ್ಕೌಟುಗಳು ಭಾಗವಹಿಸಿದ್ದರು.

### 5ನೇ ಸ್ಟೇಟ್ ರ್‍ಯಾಲಿ -1929

**ಸ್ಥಳ:** ತುಮಕೂರು

**ಕಾಲಾವಧಿ:** 15.4.1929 ರಿಂದ 20.4.1929 (6 ದಿನಗಳು)

**ಹಾಜರಿ :** 750 ಸ್ಕೌಟುಗಳು ಭಾಗವಹಿಸಿದ್ದರು.

**ವಿಶೇಷ :** ಚೀಫ್ ಸ್ಕೌಟ್‌ರವರಿಂದ ಸೂಚನೆ ಬಂದ ಒಂದು ವಾರದೊಳಗೆ ಸಂಘಟಿಸಲಾಗಿತ್ತು. ಸ್ಥಳೀಯ ಜಿಲ್ಲಾ ಆಯುಕ್ತ ಹಾಗೂ ಕಾರ್ಯದರ್ಶಿ ಶ್ರೀ ಸಿ. ಕೃಷ್ಣರಾವ್ ಅವರ ಅವಿಶ್ರಾಂತ ಸೇವೆಯೂ ಕಾರಣವಾಗಿದ್ದಿತು. (ದವಸ, ಧಾನ್ಯ ಇತ್ಯಾದಿ ದಾನ ರೂಪದಲ್ಲಿ ಬಂದು ಇಡೀ ಸಂಘಟನೆಯ ಖರ್ಚು ವೆಚ್ಚ ರೂ. 1000ಕ್ಕೆ ಸೀಮಿತವಾಗಿದ್ದಿತು)

### 6ನೇ ಸ್ಟೇಟ್ ರ್‍ಯಾಲಿ - 1931

**ಸ್ಥಳ:** ಮೈಸೂರು

**ಕಾಲಾವಧಿ:** 15.5.1931 ರಿಂದ 18.5.1931 (4 ದಿನಗಳು)

**ಹಾಜರಿ :** 900 ಸ್ಕೌಟುಗಳು ಭಾಗವಹಿಸಿದ್ದರು.

### 7ನೇ ಸ್ಟೇಟ್ ರ್‍ಯಾಲಿ - 1933

**ಸ್ಥಳ:** ಹಾಸನ
**ಕಾಲಾವಧಿ:** 9.5.1933 ರಿಂದ 14.5.1933 (6 ದಿನಗಳು)
**ಹಾಜರಿ :** 700 ಸ್ಕೌಟುಗಳು ಭಾಗವಹಿಸಿದ್ದರು.

### 8ನೇ ಸ್ಟೇಟ್ ರ್‍ಯಾಲಿ - 1938

**ಸ್ಥಳ:** ಚಿತ್ರದುರ್ಗ
**ಕಾಲಾವಧಿ:** 12.08.1938 ರಿಂದ 15.8.1938 (4 ದಿನಗಳು)
**ಹಾಜರಿ :** 1500 ಸ್ಕೌಟುಗಳು ಭಾಗವಹಿಸಿದ್ದರು.

**ವಿಶೇಷ :** ರ್‍ಯಾಲಿಯಲ್ಲಿ ಭಾಗವಹಿಸಿದ್ದ ಚೀಫ್ ಸ್ಕೌಟ್ ಅವರ ಆಶಯದ ಮೇರೆಗೆ ಸಂಸ್ಥೆಗೊಂದು ಕೇಂದ್ರ ಶಿಬಿರ ನೆಲೆಗಾಗಿ ಶೋಧನೆ ಪ್ರಾರಂಭವಾಯಿತು.

ಬೆಂಗಳೂರು ಹೆಬ್ಬಾಳ ಬಳಿಯ ಕೊಡಿಗೇಹಳ್ಳಿ ಗುಟ್ಟೆ ಆಂಜನೇಯ, ಬೆಂಗಳೂರು ದಕ್ಷಿಣ ಬನಶಂಕರಿ ಬಳಿಯ ಸಾರಕ್ಕಿ ಬಂಡೆ, ಮೈಸೂರು ರಸ್ತೆ, ಕೆಂಗಲ್ ಆಂಜನೇಯ, ನೆಲಮಂಗಲ ತಾ॥ ನಿಜಗಲ್ ಬೆಟ್ಟ, ತುಮಕೂರು ಬಳಿ ನಾಮದ ಚಿಲುಮೆ ಹೀಗೆ ಹತ್ತು ಹಲವಾರು ಸ್ಥಳಗಳ ಪರಿಶೀಲನೆಯ ಬಳಿಕ ದೊಡ್ಡಬಳ್ಳಾಪುರದ ಅಸಿಸ್ಟೆಂಟ್ ಕಮಿಷನರ್ ಶ್ರೀ ಜೆ.ಬಿ. ಮಲ್ಲಾರಾಧ್ಯರ ಪ್ರಸ್ತಾವನೆಯು ರೆವಿನ್ಯೂ ಕಮಿಷನರ್ ಶ್ರೀ ಕೆ. ಅನಂತರಾಮನ್ ಅವರಿಂದ ಅನುಮೋದನೆ ಪಡೆದು 1939ರಲ್ಲಿ "ಕೇಂದ್ರ ತರಬೇತಿ ಶಿಬಿರ" (ಸಿ.ಟಿ.ಸಿ.) ಆಗಿ ಅಸ್ತಿತ್ವಕ್ಕೆ ಬಂದಿತು. ಅದೇ ಈಗಿನ ಡಾ॥ ಆನಿಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರ.

### 9ನೇ ಸ್ಟೇಟ್ ರ್‍ಯಾಲಿ - 1940

**ಸ್ಥಳ:** ಕಬ್ಬನ್ ಪಾರ್ಕ್, ಬೆಂಗಳೂರು
**ಕಾಲಾವಧಿ:** 24.12.1940 ರಿಂದ 28.12.1940 (5 ದಿನಗಳು)
**ಹಾಜರಿ :** 3712 ಸ್ಕೌಟ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ**

1) ಚೀಫ್ ಸ್ಕೌಟ್ ಮತ್ತು ಶ್ರೀಮನ್ಮಹಾರಾಜರಾಗಿದ್ದ ಶ್ರೀ ಜಯಚಾಮರಾಜ ಒಡೆಯರ್ ಅವರು ರ್‍ಯಾಲಿಯನ್ನು ಉದ್ಘಾಟಿಸಿದರು.

2) ನೆರೆರಾಷ್ಟ್ರವಾದ ಶ್ರೀಲಂಕಾದಿಂದ ಸ್ಕೌಟ್‌ಗಳು ಭಾಗವಹಿಸಿದ್ದರು.

3) ಇದೇ ಅವಧಿಯಲ್ಲಿ ಮೊದಲನೆಯ ರಾಜ್ಯ ರೋವರ್‌ಮೂಟ್ ಸಹ ನಡೆಯಿತು.

4) ಇದೇ ಅವಧಿಯಲ್ಲಿ ಮೊದಲನೆಯ ರಾಜ್ಯ ಚೀಫ್ ಸ್ಕೌಟ್ ಶ್ರೀಕಂಠೀರವ ನರಸಿಂಹರಾಜ ಒಡೆಯರ್ ಅವರು ಸಮವಸ್ತ್ರಧಾರಿಗಳಾಗಿ ಬಂದಿದ್ದರು. ವಿವಿಧ ಕಾರ್ಯಕ್ರಮಗಳನ್ನು ವೀಕ್ಷಿಸಿ ಮೆಚ್ಚುಗೆ ವ್ಯಕ್ತಪಡಿಸಿ ಸ್ಫೂರ್ತಿ ತುಂಬಿದರು.

### 10ನೆಯ ಮೈಸೂರು ಸ್ಟೇಟ್ ರ್‍ಯಾಲಿ-ಜಾಂಬೋರಿ

**ಸ್ಥಳ:** ತುಮಕೂರು
**ಕಾಲಾವಧಿ:** 9–5–1956 ರಿಂದ 11–5–1956 (3 ದಿನಗಳು)
**ಹಾಜರಿ :** 13,861 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** 16 ವರ್ಷಗಳ ಅಂತರದಲ್ಲಿ ನಡೆದ ರಾಜ್ಯ ಸಮಾವೇಶ. ಭಾರತ್ ಸ್ಕೌಟ್ಸ್–ಗೈಡ್ಸ್ ಅಸ್ತಿತ್ವಕ್ಕೆ ಬಂದ ನಂತರದಲ್ಲಿ ನಡೆದ ಮೊದಲ ಸಮಾವೇಶ. ಮೊದಲ ಬಾರಿಗೆ ವಿಶೇಷ ಸ್ಮರಣ ಸಂಚಿಕೆ ಹೊರತರಲಾಯಿತು. ಹೈದರಾಬಾದ್ ನಿಂದ ಒಂದು ಪೆಟ್ರೋಲ್ ಸ್ಕೌಟುಗಳು ಸೈಕಲ್ ಜಾಥಾ ಬಂದು ಭಾಗವಹಿಸಿದ್ದರು. ಶ್ರೀ ಜೆ.ಬಿ. ಮಲ್ಲಾರಾಧ್ಯ, ಶಿಬಿರ ಮುಖ್ಯರಾಗಿದ್ದರು. ಡಾ॥ ಎಸ್.ಬಿ. ಕೌಶಿಕ್, ಜಾಂಬೋರಿ ನಿರ್ದೇಶಕರಾಗಿದ್ದರು. ಇದು ತುಮಕೂರಿನಲ್ಲಿ ನಡೆದ ಎರಡನೆಯ ಜಾಂಬೋರೇಟ್ ಭುವನತ್ರಯರೆನಿಸಿದ ಶ್ರೀ ಬಿ.ಸಿ. ನಂಜುಂಡಯ್ಯ, ಶ್ರೀ ಕೆ. ಶ್ರೀಕಂಠಯ್ಯ ಮತ್ತು ಶ್ರೀ ಎಂ.ಹೆಚ್. ರಾಮಚಂದ್ರರಾವ್ ಇವರ ಅವಿಶ್ರಾಂತ ಸೇವೆ ಜಾಂಬೋರಿಯ ಯಶಸ್ಸಿಗೆ ಕಾರಣವಾಯಿತು.

### 11ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಕೇಂದ್ರ ತರಬೇತಿ ಶಿಬಿರ, ದೊಡ್ಡಬಳ್ಳಾಪುರ (ಸಿ.ಟಿ.ಸಿ. ಈಗಿನ ಡಾ॥ ಆನಿಬೆಸೆಂಟ್ ಪಾರ್ಕ್)

**ಕಾಲಾವಧಿ:** 12.5.1967ರಿಂದ 16.5.1967 (3 ದಿನಗಳು)

**ಹಾಜರಿ :** 2000 ಸ್ಕೌಟ್ಸ್, ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** 11.5.1967 ರಂದು ಇದ್ದಕ್ಕಿದ್ದಂತೆ ಮುಗಿಬಿದ್ದ ಬಿರುಗಾಳಿ, ಮಳೆಗಳು ತಂಬುಗಳನ್ನು ಜಲಾವೃತವಾಡಿ, ವಾತಾವರಣವನ್ನು ಅಸ್ತವ್ಯಸ್ತಗೊಳಿಸಿ, ಶಿಬಿರ ವಾಸಿಗಳನ್ನು ಕಂಗಾಲುಗೊಳಿಸಿದಾಗ, ಸ್ಕೌಟ್–ಗೈಡ್‌ಗಳು ತೋರಿದ ಸಮಯ ಸ್ಫೂರ್ತಿ, ಕಷ್ಟಸಹಿಷ್ಣುತೆ, ತಾಳ್ಮೆ ಮತ್ತು ಸ್ಥೈರ್ಯಗಳು ಶ್ಲಾಘನೀಯವಾದುವು.

## 12ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಮಡಕೇರಿ, ಕೊಡಗು ಜಿಲ್ಲೆ
**ಕಾಲಾವಧಿ:** 8.5.1970 ರಿಂದ 12.5.1970 (6 ದಿನಗಳು)
**ಹಾಜರಿ :** 2000 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.
ವಿಶೇಷ : ಇದು ಕಾಫಿನಾಡಿನ 2ನೆಯ ರಾಜ್ಯ ಸಮಾವೇಶ.

## 13ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಹುಬ್ಬಳ್ಳಿ – ಧಾರವಾಡ
**ಕಾಲಾವಧಿ :** 9.12.1972 ರಿಂದ 14.12.1972 (6 ದಿನಗಳು)

ಈ ಜಾಂಬೋರೇಟ್ ಕರ್ನಾಟಕ ಉತ್ತರ ಭಾಗದಲ್ಲಿ (ತುಂಗ ಭದ್ರಾನದಿ ಉತ್ತರಕ್ಕೆ) ನಡೆದ ಮೊದಲನೆಯ ಸಮಾವೇಶ.

1) ದಿನಾಂಕ : 1972 ರಲ್ಲಿ ಹುಬ್ಬಳ್ಳಿ ಧಾರವಾಡ ಜಿಲ್ಲೆಯಲ್ಲಿ, ನಡೆದ ಜಾಂಬೋರೇಟ್.

2) ಮಾಜಿ ಉಪ ರಾಷ್ಟ್ರಪತಿಗಳು ಬಾಂಬೆ ಪ್ರಾಂತ್ಯದ ಮುಖ್ಯ ಸ್ಕೌಟ್ ಕಮೀಷನರ್ ಆಗಿದ್ದ ಮಾನ್ಯ ಡಾ॥ ಬಿ.ಡಿ. ಜತ್ತಿ ಆಗಿನ ಕರ್ನಾಟಕ ಮುಖ್ಯ ಮತ್ರಿಗಳು ಮುಂದೆ ರಾಷ್ಟ್ರದ ಪ್ರಧಾನ ಮಂತ್ರಿಗಳು ಆಗಿದ್ದ ಮಾನ್ಯ ಹೆಚ್.ಡಿ. ದೇವೇಗೌಡರು. ಬ್ರಿಗೇಡಿಯರ್ ಎ.ಎಸ್. ಆಯ್ಯರ್, WAGGGSನ ಮಾಜಿ ಡೈರೆಕ್ಟರ್ ಹಾಗೂ ನಮ್ಮ ಮಣೆ ಬಳಿಯಸಂಗಂನ ಕೋಶಾಧಿಕಾರಿಗಳು ಮಾಜಿ ರಾಷ್ಟ್ರ ಆಯುಕ್ತರು ಹಾಗೂ ವಿಶ್ವಸಂಸ್ಥೆ ಶಾಂತಿದೂತ ಪ್ರಶಸ್ತಿ ಪುರಸ್ಕೃತ ಕೇಂದ್ರ ಸಚಿವ ಶ್ರೀ ಟಿ. ಎ. ಪೈ, ಸರ್ದಾರ್ ಲಕ್ಷ್ಮಣ್‌ಸಿಂಗ್, ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿ ಡಾ॥ ಅಡ್ಕೆ ಇವರುಗಳೇ ಮುಂತಾದ ಪ್ರತಿಭಾನ್ವಿತ ವ್ಯಕ್ತಿಗಳು ಜಾಂಬೋರೇಟ್‌ಗಳಿಗೆ ಆಗಮಿಸಿ ಶೋಭೆ ತಂದಿರುವುದು ಅಲ್ಲದೆ ಸ್ಕೌಟ್–ಗೈಡ್‌ಗಳಿಗೆ ಆಶೀರ್ವಚನ ನೀಡಿರುತ್ತಾರೆ.

## 14ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಸಂಡೂರು, ಬಳ್ಳಾರಿ ಜಿಲ್ಲೆ
**ಕಾಲಾವಧಿ:** 18.10.1975 ರಿಂದ 23.10.1975 (6 ದಿನಗಳು)
**ಹಾಜರಿ :** 3000 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ಅವಧಿಪೂರ್ಣ ಮಳೆ ಬರುತ್ತಿದ್ದು, ಸಂಡೂರು ರಾಜವಂಶದವರು ಮಕ್ಕಳಿಗೆ ಸೂಕ್ತ ವಸತಿ ಕಲ್ಪಿಸಿದ್ದರು.

## 15ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಸಕಲೇಶಪುರ, ಹಾಸನ ಜಿಲ್ಲೆ
**ಕಾಲಾವಧಿ :** 27.12.1977 ರಿಂದ 2.1.1978 (7 ದಿನಗಳು)
**ಹಾಜರಿ :** 3048 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ರಾಜ್ಯ ಸಂಸ್ಥೆಯ 60ನೆಯ ವರ್ಷ ಮತ್ತು ವಿಶ್ವ ಸ್ಕೌಟಿಂಗ್‌ನ 70ನೆಯ ವರ್ಷಗಳ ಆಚರಣೆಗಳು. ಸ್ಥಳೀಯ ಸೆಂಟ್ ಜೋಸೆಪ್ಸ್ ಕಾನ್ವೆಂಟ್‌ನ ಚಾಪಲ್‌ನಲ್ಲಿ ನಡೆದ ಮಿಡ್‌ನೈಟ್ ಮಾಸ್ "ಕಾಫಿ"ನಾಡಿನ ಮೂರನೆಯ ಹಾಗೂ ಜಿಲ್ಲೆಯ 2ನೆಯ ಸಮಾವೇಶ.

## 16ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಕುಮಟಾ, ಉತ್ತರ ಕನ್ನಡ ಜಿಲ್ಲೆ
**ಕಾಲಾವಧಿ :** 17.1.1980 ರಿಂದ 23.1.1980 (7 ದಿನಗಳು)
**ಹಾಜರಿ :** 3500 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ಕರಾವಳಿ ಪ್ರದೇಶದ ಮೊದಲ ಸಮಾವೇಶ ಸಮುದ್ರತೀರ, ಶರಾವತಿ ನದಿಯ ಹಿನ್ನೀರಿನಲ್ಲಿ ಮೋಟಾರ್ ಬೋಟ್ ಕ್ರುಯಿಸ್, ಕಬ್ಸ್–ಬುಲ್‌ಬುಲ್ಸ್ ಉತ್ಸವ ವಿಶ್ವ ಗೈಡಿಂಗ್‌ನ 70ನೆಯ ವರ್ಷ ಆಚರಣೆ.

## 17ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ರಾಯಚೂರು
**ಕಾಲಾವಧಿ :** 3–1–1982 ರಿಂದ 9–1–1982 (7 ದಿನಗಳು)
**ಹಾಜರಿ :** 5000 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ವಿಶ್ವ ಸ್ಕೌಟಿಂಗ್‌ನ ಪ್ಲಾಟಿನಂ ಮಹೋತ್ಸವ ಹಾಗೂ "ವೋಸಂ"ನ "ಸ್ಕೌಟ್ ವರ್ಷ" ಆಚರಣೆ.

## 18ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಮೈಸೂರು
**ಕಾಲಾವಧಿ :** 23.1.1985 ರಿಂದ 28.1.1985 (6 ದಿನಗಳು)
**ಹಾಜರಿ :** 3800 ಸ್ಕೌಟ್ಸ್–ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ಅಂತರಾಷ್ಟ್ರೀಯ ಯುವ ವರ್ಷ ಮತ್ತು ವಿಶ್ವ ಗೈಡಿಂಗ್‌ನ ಪ್ಲಾಟಿನಂ ಮಹೋತ್ಸವ ಆಚರಣೆ. ಸಿಕ್ಕಿಂ, ಹಿಮಾಚಲ ಪ್ರದೇಶ, ಹರ್ಯಾಣ, ಮಧ್ಯಪ್ರದೇಶ, ಪಾಂಡಿಚೇರಿ, ತಮಿಳ್ನಾಡು, ಆಂಧ್ರಪ್ರದೇಶ, ಕೇಂದ್ರೀಯ ವಿದ್ಯಾಲಯ ಕೇರಳ, ರಾಜ್ಯಗಳ ಪಾಲ್ಗೊಳ್ಳುವಿಕೆ.

## 19ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಶಿವಮೊಗ್ಗ
**ಕಾಲಾವಧಿ :** 7.12.1987 ರಿಂದ 14.12.1987 (8 ದಿನಗಳು)
**ಹಾಜರಿ :** 2250 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ಇದೇ ಅವಧಿ ಜೊತೆಗೂಡಿದ್ದ ರಾಷ್ಟ್ರ ಸಂಸ್ಥೆಯ ದಕ್ಷಿಣ ಪ್ರಾದೇಶಿಕ ಸಮಾವೇಶ ಹಾಗೂ ಸಮೈಕ್ಯತಾ ಶಿಬಿರದಲ್ಲಿ ದೇಶದ 17 ರಾಜ್ಯಗಳಿಂದ ಬಂದ 1200 ಸ್ಕೌಟ್ಸ್ ಮತ್ತು ಗೈಡ್ಸ್, ರಾಜ್ಯದ ವಿವಿಧ ಜಿಲ್ಲೆಗಳ 1050 ಸ್ಕೌಟ್ಸ್-ಗೈಡ್ಸ್ ಸೇರಿ ಒಟ್ಟು 2250 ಮಕ್ಕಳು ಭಾಗವಹಿಸಿದ್ದರು. ಇದು ಶಿವಮೊಗ್ಗದಲ್ಲಿ 61 ವರ್ಷಗಳ ಬಳಿಕ ನಡೆದ 2ನೆಯ ಸಮಾವೇಶ.

## 20ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಸೂರತ್‌ಕಲ್, ದಕ್ಷಿಣ ಕನ್ನಡ ಜಿಲ್ಲೆ
**ಕಾಲಾವಧಿ :** 26.12.1990 ರಿಂದ 31.12.1990 (6 ದಿನಗಳು)
**ಹಾಜರಿ :** 5000 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ಕರ್ನಾಟಕ ಕರಾವಳಿ ಪ್ರದೇಶದಲ್ಲಿ ನಡೆದ 2ನೆಯ ಸಮಾವೇಶ.

## 21ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಕೋಲಾರ (ಕೆ.ಜಿ.ಎಫ್) ಕೋಲಾರ ದಕ್ಷಿಣ ಜಿಲ್ಲೆ
**ಕಾಲಾವಧಿ :** 16.1.1993 ರಿಂದ 22.1.1993 (6 ದಿನಗಳು)
**ಹಾಜರಿ :** 4500 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## 22ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಬೀದರ್
**ಕಾಲಾವಧಿ :** 22.1.1995 ರಿಂದ 25.1.1995 (7 ದಿನಗಳು)
**ಹಾಜರಿ :** 5000 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## 23ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ತುಮಕೂರು
**ಕಾಲಾವಧಿ :** 4-1-1997 ರಿಂದ 10-1-1997 (7 ದಿನಗಳು)
**ಹಾಜರಿ :** 8000 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** 41 ವರ್ಷಗಳ ಅಂತರದಲ್ಲಿ ನಡೆದ 3ನೆಯ ರಾಜ್ಯ ಜಾಂಬೋರೇಟ್ 20ನೆಯ ಶತಮಾನದ ಕೊನೆಯ ಜಾಂಬೋರೇಟ್

## 24ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಬೆಳಗಾವಿ
**ಕಾಲಾವಧಿ :** 4.1.2001 ರಿಂದ 10.1.2001 (6 ದಿನಗಳು)
**ಹಾಜರಿ :** 4800 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ಇದು 21ನೆಯ ಶತಮಾನದ ಮೊದಲ ರಾಜ್ಯ ಜಾಂಬೋರೇಟ್

## 25ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ದಾವಣಗೆರೆ
**ಕಾಲಾವಧಿ :** 2.1.2006 ರಿಂದ 8.1.2006 (7 ದಿನಗಳು)
**ಹಾಜರಿ :** 5700 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

**ವಿಶೇಷ :** ದಕ್ಷಿಣ ಪ್ರಾಂತ್ಯ ರೈಲ್ವೆ ಮತ್ತು ಕೇರಳ ರಾಜ್ಯಗಳಿಂದ ಪ್ರತಿನಿಧಿಗಳು ಭಾಗವಹಿಸಿದ್ದರು. ಇದು ಕರ್ನಾಟಕ ರಾಜ್ಯ ಜಾಂಬೋರೇಟ್‌ಗಳ ರಜತೋತ್ಸವ.

## 26ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ತರಳು, ಸಿಆರ್‌ಪಿಎಫ್ ಕವಾಯತು ಮೈದಾನ, ಕಗ್ಗಲೀಪುರ, ಬೆಂಗಳೂರು ಗ್ರಾಮಾಂತರ
**ಕಾಲಾವಧಿ :** 6.1.2011 ರಿಂದ 12.1.2011 (6 ದಿನಗಳು)
**ಹಾಜರಿ :** 8000 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## 27ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ

**ಕಾಲಾವಧಿ :** 17.1.2015 ರಿಂದ 23.1.2015 (7 ದಿನಗಳು)
**ಹಾಜರಿ :** 5000 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

## 28ನೆಯ ರಾಜ್ಯ ಜಾಂಬೋರೇಟ್

**ಸ್ಥಳ:** ಡಾ॥ ಆನಿಬೆಸೆಂಟ್ ಸ್ಕೌಟ್ಸ್-ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ

**ಕಾಲಾವಧಿ : 27-12-2019** ರಿಂದ **2-1-2020** ವರೆಗೆ

**ಹಾಜರಿ : 6000 ಸ್ಕೌಟ್ಸ್**-ಗೈಡ್ಸ್‌ಗಳು ಭಾಗವಹಿಸುವರೆಂದು **ನಿರೀಕ್ಷಿಸಲಾಗಿದೆ.**

◆



# ದೇಶ ಸೇವೆಯೇ – ಈಶ ಸೇವೆ
# ಜನ ಸೇವೆಯೇ – ಜನಾರ್ಧನ ಸೇವೆ

◆ ಎನ್. ಶ್ರೀನಿವಾಸನ್, ಎಲ್.ಟಿ.(ಸ್ಕೌ)
ಸಹಾಯಕ ರಾಜ್ಯ ಆಯುಕ್ತರು

"ನಾನು ದೇವರಿಗೂ ಮತ್ತು ದೇಶಕ್ಕೂ ನನ್ನ ಕರ್ತವ್ಯವನ್ನು ಮಾಡುತ್ತೇನೆ,
ಇತರರಿಗೆ ಸಹಾಯ ಮಾಡುತ್ತೇನೆ. . . . ."

ಇದು ನಮ್ಮ ಪ್ರತಿಜ್ಞೆಯ ಎರಡು ಅಂಶಗಳು. ಮೊದಲನೆಯ ಅಂಶದಲ್ಲಿ ಎರಡು ಉಪಾಂಶಗಳು ಅಡಕವಾಗಿವೆ. "ದೇವರಿಗೆ ಮತ್ತು ದೇಶಕ್ಕೆ". ಈ ಎರಡನ್ನು ಒಂದರಲ್ಲಿಯೇ ಅಡಕ ಮಾಡಿರುವುದರಲ್ಲಿ ಒಂದು ಮಹತ್ತರ ಅಂಶವನ್ನು ಕಾಣಬಹುದಾಗಿದೆ. ಎರಡೂ ಸಂದರ್ಭಗಳಲ್ಲಿ ನಮ್ಮ ಕರ್ತವ್ಯ ಸಮಾನವಾದವುಗಳು. ದೇವರು ಎಂದರೆ, ಅದೊಂದು ಅತೀತ ಶಕ್ತಿ. ನಮಗೆ ಮೀರಿದ ಹಾಗೂ ನಮ್ಮನ್ನೆಲ್ಲಾ ನಿಯಂತ್ರಿಸುವ ಪ್ರಬಲ ಶಕ್ತಿ. ಬೇರೆ-ಬೇರೆ ಧರ್ಮದವರು, ಬೇರೆ-ಬೇರೆ ಹೆಸರುಗಳಿಂದ ಕರೆದರೂ, ಆ ಶಕ್ತಿಯು ಮಾತ್ರ ಒಂದೆ.

ಆ ಶಕ್ತಿಗೆ ಹುಲುಮಾನವರಾದ ನಾವು ಏನು ತಾನೆ ಕರ್ತವ್ಯ ಸಲ್ಲಿಸಬಲ್ಲೆವು? ಆ ಶಕ್ತಿಯು ನಮ್ಮಿಂದ ಅದನ್ನು ಅಪೇಕ್ಷಿಸುವುದೂ ಇಲ್ಲ. ಆದರೂ ಸಹ ನಮ್ಮ ಕಿಂಚಿತ್ ಕರ್ತವ್ಯ ಮಾಡದೇ ಇದ್ದರೆ ಅದು ನಮ್ಮ ಕಡೆಯಿಂದಾಗುವ ದೊಡ್ಡ ಲೋಪ. ಎಷ್ಟೆಲ್ಲಾ ಸೌಕರ್ಯ, ಸೌಲಭ್ಯಗಳನ್ನು ನೀಡಿರುವ ಆ ದೇವದೇವನಿಗೆ ಹೇಗೆ ತಾನೆ ಕರ್ತವ್ಯ ಸಲ್ಲಿಸುವುದು? ಹೋಮ-ಹವನ ಮಾಡಬೇಕೆ? ಅಭಿಷೇಕ-ಅರ್ಚನಾದಿಗಳನ್ನು ಮಾಡಬೇಕೆ? ಕಾಣಿಕೆ ಸಮರ್ಪಿಸಬೇಕೆ? ಭೂರಿ ಭೋಜನ ಹಾಕಿಸಬೇಕೆ? ಇವೆಲ್ಲವೂ ಕೇವಲ ಲೌಕಿಕ ಹಾಗೂ ತೋರಿಕೆ ಅಷ್ಟೆ.

ಭಗವಂತನಿಗೆ ಮಾಡಬೇಕಾದ ಕರ್ತವ್ಯ ಬಹಳ ಸರಳ ಮತ್ತು ಸ್ಪಷ್ಟ **"ಭೂತಕಾಲದ ಎಲ್ಲಾ ಅನುಗ್ರಹಗಳಿಗಾಗಿ ಹಾಗೂ ಭವಿಷ್ಯತ್ತಿನ ಕೊಡುಗೆಗಳಿಗಾಗಿ ಕೃತಜ್ಞತೆ ಸಲ್ಲಿಸಲು ಆ ದೇವನನ್ನು ನೆನಪಿಸಿಕೋ?** (ಪ್ರಾರ್ಥನೆಗಳ ಮೂಲಕ) **"ನಮ್ಮ ಹಿರಿಯರು ಯಾವ ಧರ್ಮದಲ್ಲಿ ನಂಬಿಕೆ ಇಟ್ಟು ಮೇಲ್ಪಂಕ್ತಿ ಹಾಕಿದ್ದಾರೆಯೋ ಆ ಮಾರ್ಗದಲ್ಲಿ ನಡೆ"** ಇಷ್ಟು ಮಾಡಿದರೆ ಸಾಕು. ದೇವರಿಗೆ ನಮ್ಮ ಕರ್ತವ್ಯ ಸಲ್ಲಿಸಿದಂತೆ.

ಇನ್ನು ದೇಶಕ್ಕೆ ಕರ್ತವ್ಯ. ದೇವರು ನಮ್ಮ ಕಣ್ಣಿಗೆ ಕಾಣದ ತತ್ವವಾದರೆ, ದೇಶ ಕಣ್ಣಿಗೆ ಕಾಣುವ ವಾಸ್ತವತೆ. ದೇವರಿಗೆ ಮನಸ್ಸಿನ ಮೂಲಕ, ಪ್ರಾರ್ಥನೆಗಳ ಮೂಲಕ, ನಡವಳಿಕೆಗಳ ಮೂಲಕ, ಭಾವನೆಗಳ ಮೂಲಕ, ನಮ್ಮ ಕರ್ತವ್ಯ ಸಲ್ಲಿಸಬಹುದಾದರೆ, ದೇಶಕ್ಕೆ ಭೌತಿಕವಾಗಿ ನಮ್ಮ ಕಾರ್ಯಗಳ ಮೂಲಕ ಕರ್ತವ್ಯ ಸಲ್ಲಿಸಬೇಕು. ಇಚ್ಛಾಶಕ್ತಿಯನ್ನು ಹೊಂದಿ, ಮುಂದುವರೆಯಬೇಕು. ನನ್ನ ದೇಶ, ನನ್ನ ನಾಡು ಎಂಬ ಭಾವನೆ ಮೊಟ್ಟ ಮೊದಲು ಮೂಡಬೇಕು. ಅದನ್ನು ಪ್ರೀತಿಸಬೇಕು. ದೇಶವೆಂದರೆ, ಬರಿಯ ಮಣ್ಣಲ್ಲ, ಅದೊಂದು ಪುಣ್ಯ ಭೂಮಿ ಎಂದು ಅರಿಯಬೇಕು. ದೇಶದ ನೆಲ-ಜಲ-ಗಾಳಿ ಈ ಎಲ್ಲವನ್ನೂ ರಕ್ಷಿಸುವ ಜವಾಬ್ದಾರಿ ನಮ್ಮದು. ನಾವು ಬಾಳಿ ಬದುಕಲು ಇದು ಅವಶ್ಯಕ. ಅವುಗಳನ್ನು ಸೂಕ್ತ ರೀತಿಯಲ್ಲಿ ಬಳಸುವ ವಿಧಾನಗಳನ್ನು ತಿಳಿಯಬೇಕು ಮತ್ತು ಇತರರಿಗೆ ತಿಳಿಹೇಳಬೇಕು. ಇತ್ತೀಚಿನ ದಿನಗಳಲ್ಲಿ ಜಲ-ಗಾಳಿಗಳ ಮಾಲಿನ್ಯ ಹೆಚ್ಚಾಗುತ್ತಿರುವುದು ಕಂಡುಬರುತ್ತಿದೆ. ಇದರಿಂದ, ಮನುಕುಲಕ್ಕೆ ಮಾರಕ ವಾತಾವರಣ ಸೃಷ್ಟಿಯಾಗುತ್ತಿದೆ. ಇದರಿಂದ ಪಾರಾಗುವ ವಿಧಾನಗಳನ್ನು ಅನುಸರಿಸಬೇಕು ಹಾಗೂ ಜನರಲ್ಲಿ ಇದರ ಬಗ್ಗೆ ಜಾಗೃತಿ ಮೂಡಿಸಬೇಕು. ನೀರಿನ ಅತಿಯಾದ ಹಾಗೂ ವಿವೇಚನಾರಹಿತ ಬಳಕೆಯಿಂದ ಜಲಕ್ಷಾಮದ ಭೀತಿ ತಲೆದೋರುತ್ತಿದೆ. ವಾಯು ಮಾಲಿನ್ಯದಿಂದ ವಾತಾವರಣದ ತಾಪಮಾನ ಹೆಚ್ಚಾಗುತ್ತಿದೆ. ರೋಗಭಾದೆ ಹೆಚ್ಚುತ್ತಿದೆ. ಇವುಗಳ ಬಗ್ಗೆ ಜನಜಾಗೃತಿ ಮೂಡಿಸಬೇಕು.

ಮಾನವ ತನ್ನ ಸ್ವಾರ್ಥಕ್ಕಾಗಿ ಮರಗಳನ್ನು ಮತ್ತು ಕಾಡನ್ನು ಕಡಿಯುತ್ತಿದ್ದಾನೆ. ಇದರಿಂದ ಮಳೆ ಕಡಿಮೆಯಾಗಿ, ವಾಯುಮಾಲಿನ್ಯ ಹೆಚ್ಚುತ್ತದೆ. ಪ್ರಾಣಿ ಸಂಕುಲ, ಪಕ್ಷಿ ಸಂಕುಲ, ಇವುಗಳ ನಾಶಕ್ಕೆ ಕಾರಣವಾಗುತ್ತವೆ. ವಾತಾವರಣದ ಸಮತೋಲನ ತಪ್ಪುತ್ತದೆ. ಕಾಡಿನ ಪ್ರಾಣಿಗಳು ನಾಡಿಗೆ ಧಾಳಿ ಇಡುತ್ತವೆ. ಮಣ್ಣಿನ ಸವಕಳಿ ಉಂಟಾಗಿ ಭೂ ಕುಸಿತ ಉಂಟಾಗುತ್ತದೆ. ಜನರ ಸಾವು ಉಂಟಾಗುತ್ತದೆ. ಹೀಗೆ

ಘಟನೆಗಳ ಸರಮಾಲೆಯೇ ಆಗುತ್ತದೆ. **"ಸ್ಕೌಟ್-ಗೈಡ್ ಪ್ರಕೃತಿ ಪ್ರೇಮಿ"** ಎಂಬ ಅಂಶಕ್ಕೆ ಅನುಸಾರವಾಗಿ ಇದನ್ನು ತಡೆಯಲು ಪ್ರಯುತ್ನಿಸಬೇಕು. ವಾತಾವರಣವನ್ನು ಸ್ವಚ್ಛವಾಗಿಡಲು ಕೈಜೋಡಿಸಬೇಕು. ಜಲಸಂರಕ್ಷಣೆ, ನೆಲಸಂರಕ್ಷಣೆ, ಪ್ರಕೃತಿ ಸಂರಕ್ಷಣೆ, ಕೆರೆಗಳ ಪುನರುಜ್ಜೀವನ, ಇವೇ ಮುಂತಾದ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಬೇಕು.

ಆಧುನಿಕ ಯುಗದ ಮತ್ತೊಂದು ಅಸುರ ಎಂದರೆ **"ಪ್ಲಾಸ್ಟಿಕ್"**. ಇದನ್ನು ಆವಿಷ್ಕಾರ ಮಾಡಿದಾಗ ಉಂಟಾದ ಆನಂದ, ಈಗ "ಇದನ್ನು ಏಕಾದರೂ ಕಂಡುಹಿಡಿದರೋ" ಎಂಬಂತಾಗಿದೆ. ಅದಕ್ಕೆ ಕಾರಣ ಪ್ಲಾಸ್ಟಿಕ್ ಜೈವಿಕ ವಿಭಜಕ ವಸ್ತುವಲ್ಲ. ಇದು ಕೊಳೆಯುವುದಿಲ್ಲ. ನೂರಾರು ವರ್ಷ ಹಾಗೆಯೇ ಇರುತ್ತದೆ. ಇದನ್ನು ಸುಟ್ಟರೆ ವಿಷಾನಿಲ ಹೊರಬರುತ್ತದೆ. ಹಾಗಾಗಿ ಇದೊಂದು ದೊಡ್ಡ ಮಾಲಿನ್ಯಕಾರಕ ವಸ್ತು, ಇದರಿಂದ ಹೆಚ್ಚು ತೊಂದರೆಗೆ ಒಳಗಾಗಿರುವುದು ಹಸು, ಮುಂತಾದ ಪ್ರಾಣಿಸಂಕುಲಗಳು ಹಾಗೂ ಜಲಚರಗಳು, ಇಂತಹ ಪ್ಲಾಸ್ಟಿಕ್ ಬಳಕೆಯ ವಿರುದ್ಧವಾಗಿ ಹಾಗೂ ಇದರ ಪರ್ಯಾಯ ವಸ್ತುಗಳ ಬಳಕೆಯ ಬಗ್ಗೆ ಜನಜಾಗೃತಿ ಮೂಡಿಸಬೇಕು.

ಇವಿಷ್ಟೂ ದೇವರು ಮತ್ತು ದೇಶಕ್ಕೆ ನಮ್ಮ ಕರ್ತವ್ಯದ ಬಗ್ಗೆ ಆದರೆ, ಇನ್ನು ಇತರರಿಗೆ ಸಹಾಯದ ಬಗ್ಗೆ.

ಇತರರು ಎಂದರೆ, ತನ್ನನ್ನು ಬಿಟ್ಟು ಉಳಿದವರೆಲ್ಲರೂ ಇತರರು. ತನ್ನ ಪೋಷಕರಿಂದ ಹಿಡಿದು ವಿಶ್ವದ ಎಲ್ಲರೂ ಇತರರೆ. ಅವರೆಲ್ಲರಿಗೂ ಸಂದರ್ಭೋಚಿತವಾಗಿ, ಶಕ್ತ್ಯಾನುಸಾರವಾಗಿ ನೆರವಾಗಬೇಕು. ಮನೆಗೆ ತರಕಾರಿ ತಂದುಕೊಡುವಂತಹ ಕಾರ್ಯದಿಂದ ಹಿಡಿದು, ನಾವು ಮಾಡುವ ಯಾವುದೇ ಕೆಲಸ ಇತರರಿಗೆ ಸಹಾಯ ಮಾಡುವಂತಿರಬೇಕು. ಆದರೆ, ನಾವು ಮಾಡಿದ ಸಹಾಯಕ್ಕೆ ಪ್ರತಿಫಲ ಅಪೇಕ್ಷಿಸಬಾರದು. ಲಂಡನ್ನಿನ **"ಅನಾಮಧೇಯ ಸ್ಕೌಟ್"**ನಂತೆ ಇರಬೇಕು. ತಪ್ಪಿದಲ್ಲಿ ಅದು ಕೂಲಿಯಾಗುತ್ತದೆ. ನಾವು ಕೂಲಿಗಳಲ್ಲ. ಸೇವಕರು, ವೈಯುಕ್ತಿಕವಾಗಿ ಅಥವಾ ಗುಂಪುಗಳಲ್ಲಿ ಸಹಾಯ ಮಾಡಬಹುದು. ಜಾತ್ರೆಗಳು, ಮೇಳಗಳು, ಸ್ವಯಂಸೇವಾ ಶಿಬಿರಗಳು, ವೈದ್ಯಕೀಯ ಶಿಬಿರಗಳು, ಇವೆ ಮುಂತಾದ ಸ್ಥಳಗಳಲ್ಲಿ ನಮ್ಮ ಸೇವೆ ಸಲ್ಲಿಸಬಹುದು. ಪ್ರಕೃತಿ ವಿಕೋಪ ಸಂದರ್ಭಗಳಲ್ಲಿ ನಮ್ಮ ಸೇವೆ ಅತೀ ಅವಶ್ಯಕ. ಇಂಥಹ ಸಂದರ್ಭಗಳಲ್ಲಿ ಆಹ್ವಾನವನ್ನು ಅಪೇಕ್ಷಿಸದೇ, ನಾವಾಗಿಯೇ ತೆರಳಿ ಸೇವೆ ಸಲ್ಲಿಸಬೇಕು.

ಈ ರೀತಿಯ ನಿಸ್ವಾರ್ಥ ಸೇವೆ ಸಲ್ಲಿಸಿದಾಗ, ಸಮಾಜ ನಮ್ಮನ್ನು ಗುರುತಿಸುತ್ತದೆ. ಇತರರು ಸಹ ಇದರಿಂದ ಸ್ಫೂರ್ತಿಗೊಂಡು ನಮ್ಮೊಡನೆ ಕೈಜೋಡಿಸುತ್ತಾರೆ. ಆ ರೀತಿ ಸಹಾಯ ಪಡೆದವರು ಆನಂದದಿಂದ ಹೇಳುವ ಶುಭಾಶಯಗಳು ಅಥವ ಆಶೀರ್ವಾದಗಳು ನಮಗೆಲ್ಲಾ ಶ್ರೀ ರಕ್ಷೆಯಾಗುತ್ತದೆ. **"ದೀನದುರ್ಬಲರಲ್ಲಿ, ಸಂತ್ರಸ್ತರಲ್ಲಿ ದೇವರನ್ನು ಕಾಣು"** ಎಂಬಂತೆ ಇರಬೇಕು ನಮ್ಮ ಸೇವೆ. ಈಶನಿಗೆ ನಮ್ಮ ಸೇವೆಯನ್ನು (ಮೇಲೆ ಹೇಳಿದಂತೆ) ಸಲ್ಲಿಸದಿದ್ದರೂ ತಪ್ಪಿಲ್ಲ. ಆದರೆ, ದೇಶಕ್ಕೆ ಹಾಗೂ ಇತರರಿಗೆ ಅವಕಾಶ ಸಿಕ್ಕಾಗಲೆಲ್ಲಾ, ನಿಮ್ಮ ಕೈಲಾದಷ್ಟು ಸೇವೆಯನ್ನು ದೇಶಕ್ಕೆ ಹಾಗೂ ಇತರರಿಗೆ ಅವಕಾಶ ಸಿಕ್ಕಾಗೆಲ್ಲಾ ನಿಮ್ಮ ಕೈಲಾದಷ್ಟು ಸೇವೆಯನ್ನು ತಪ್ಪದೇ ಮಾಡಿದರೆ ಅದೇ ಈಶ ಸೇವೆ.

ಈ ನಿಟ್ಟಿನಲ್ಲಿ ನಮ್ಮ ಸ್ಕೌಟ್-ಗೈಡ್, ರೋವರ್-ರೇಂಜರ್‌ಗಳು ದಿಟ್ಟ ಹೆಜ್ಜೆ ಇಟ್ಟು, ಸಮುದಾಯದ, ಅಧಿಕಾರಿಗಳ ಹಾಗೂ ಸರ್ಕಾರದ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಉಡುಪಿಯ ಸ್ಕೌಟ್-ಗೈಡ್‌ಗಳು, ಅಲ್ಲಿನ ರೈಲ್ವೇ ನಿಲ್ದಾಣದಲ್ಲಿ ಅನೇಕ ತಿಂಗಳುಗಳ ಕಾಲ ಸ್ವಚ್ಛತಾ ಕಾರ್ಯಕ್ರಮ ನಡೆಸಿ, ರೈಲ್ವೇ ಅಧಿಕಾರಿಗಳ ಹಾಗೂ ಸಾರ್ವಜನಿಕರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಹಾಸನದಲ್ಲಿ ಮುಕ್ತದಳದ ರೋವರ್-ರೇಂಜರ್‌ಗಳು ತಮ್ಮ ಸುತ್ತಮುತ್ತಲಿನ ನೀರಿನ ಕಲ್ಯಾಣಿಗಳನ್ನು ಪುನರುಜ್ಜೀವನಗೊಳಿಸಿ, ಜಲಪೂರಣ ಮಾಡಿ ಮಾದರಿಯಾಗಿದ್ದಾರೆ. ಪ್ರಶಸ್ತಿ ಪುರಸ್ಕಾರ ಪಡೆದು. ಸರ್ಕಾರದ-ಸಾರ್ವಜನಿಕರ ಅಭಿಮಾನಕ್ಕೆ ಪಾತ್ರರಾಗಿದ್ದಾರೆ. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ದಳನಾಯಕರು-ನಾಯಕಿಯರು ಮತ್ತು ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಸ್ವಚ್ಛತಾ ಕಾರ್ಯ, ಬೀಜದುಂಡೆ ತಯಾರಿಕೆ, ಗಿಡನೆಡುವಿಕೆ, ಸ್ವಯಂಸೇವಾ ಕಾರ್ಯ, ರಕ್ತದಾನ ಶಿಬಿರ, ಮುಂತಾದವುಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಸಮುದಾಯಕ್ಕೆ ಹಾಗೂ ಪ್ರಕೃತಿ ಸಂರಕ್ಷಣೆಗೆ ತಮ್ಮದೇ ಆದ ಕೊಡುಗೆಯನ್ನು ನೀಡುತ್ತಿದ್ದಾರೆ.

◆

*No need for us to get depressed over temporary setbacks or disappointments ; they are bound to come from time to time. Let us rise above them and look to the big import of what we are at.*

**- Lord Baden Powell**



# ಸ್ಕೌಟಿಂಗ್-ಗೈಡಿಂಗ್ ಮತ್ತು ಧರ್ಮ

◆ ದಿ. ಎಸ್.ಕೆ. ಪ್ರಭಾ
ಮಾಜಿ ಜಂಟಿ ರಾಜ್ಯ ಕಾರ್ಯದರ್ಶಿ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, (ಗೈಡ್ಸ್) ಕರ್ನಾಟಕ

**ಸ್ಕೌಟಿಂಗ್** ಮತ್ತು ಗೈಡಿಂಗ್ ಒಂದು ಅಂತಾರಾಷ್ಟ್ರೀಯ ಯುವ ಚಳವಳಿ. ಈ ಚಳವಳಿ ಜಾತಿ ಮತ ಧರ್ಮ ಭೇದವಿಲ್ಲದೆ ಎಲ್ಲರನ್ನೂ ಸ್ವಾಗತಿಸುತ್ತದೆ, ಇದನ್ನು ಸ್ಥಾಪಿಸಿದವರು ರಾಬರ್ಟ್ ಸ್ಟೀಫನ್‌ಸನ್ ಸ್ಮಿತ್ ಬೇಡನ್ ಪಾವೆಲ್. ಇವರು ವೃತ್ತಿಯಿಂದ ಸೈನಿಕರು, ಪ್ರವೃತ್ತಿಯಿಂದ ಶಾಂತಿ ಪ್ರಿಯರು. ಚಳವಳಿಗೆ ಅವರು ನೀಡಿರುವ ಮೂಲ ಸಿದ್ಧಾಂತ ಸರ್ವ ಧರ್ಮಗಳ ಸಾರವಾಗಿದೆ.

ಅವರು ಕ್ರೈಸ್ತ ಮತಕ್ಕೆ ಸೇರಿದವರು, ದೈವ ಭಕ್ತರು. ನಿಷ್ಠಾವಂತ ಕ್ರೈಸ್ತ ಅನುಯಾಯಿಗಳು. ಅವರು ಕ್ರೈಸ್ತ ಧರ್ಮವನ್ನು ಎತ್ತಿ ಹಿಡಿಯಲು ಪವಾಡಗಳ ಅವಶ್ಯಕವಿಲ್ಲವೆಂದು, ಧರ್ಮದ ಅನುಯಾಯಿಗಳು ಸತ್ಕರ್ಮ ಮಾಡುವವರಾಗಿ ಕ್ರಿಯಾಶೀಲರಾಗಿರಬೇಕೆಂದು ಹೇಳಿದ್ದಾರೆ. ಅವರು ಸ್ವತಃ ಸರ್ವ ಧರ್ಮಗಳನ್ನು ಗೌರವಿಸುತ್ತಿದ್ದರು. ಆದ್ದರಿಂದಲೇ ಎಲ್ಲಾ ಧರ್ಮದವರು ಈ ಚಳವಳಿಯ ಸದಸ್ಯರಾಗಲು ಸಾಧ್ಯವಾಗಿದೆ. ಈ ಚಳವಳಿಯು ವಿಶ್ವ ಭ್ರಾತೃತ್ವ ಮತ್ತು ವಿಶ್ವಶಾಂತಿಯನ್ನು ಪ್ರತಿಪಾದಿಸುವ ವಿಶ್ವಮಾನವ ಧರ್ಮವಾಗಿದೆ. ಈ ಚಳವಳಿಯು 112 ವರ್ಷಗಳನ್ನು ದಾಟಿ ಸದೃಢವಾಗಿ ಮುಂದೆ ಸಾಗುತ್ತಿದೆ.

ಲಾರ್ಡ್ ಬಿ.ಪಿ.ಯವರು ವಿವಿಧ ದೇಶಗಳಲ್ಲಿ ಈ ಚಳವಳಿಯನ್ನು ಪ್ರಸಾರ ಮಾಡುವಾಗ ಮೂಲಭೂತ ಸಿದ್ಧಾಂತಕ್ಕೆ ಧಕ್ಕೆ ಬಾರದಂತೆ ಈ ಚಳವಳಿಯನ್ನು ನಿಮ್ಮ ಧರ್ಮ ಮತ್ತು ಸಂಸ್ಕೃತಿಗೆ ಅನುಗುಣವಾಗಿ ಅಳವಡಿಸಿಕೊಳ್ಳಿ ಎಂದು ತಿಳಿಸಿದರು. ಅವರು ಸ್ವತಃ ಸರ್ವಧರ್ಮಗಳನ್ನು ಗೌರವಿಸಿದರು. ಆದ್ದರಿಂದ ಸ್ಕೌಟಿಂಗ್ ಮತ್ತು ಗೈಡಿಂಗ್‌ನಂತಹ ಚಳವಳಿಯು ಜಾತ್ಯತೀತವಾದ ನಮ್ಮ ರಾಷ್ಟ್ರಕ್ಕೆ ಅವಶ್ಯಕ. ನಮ್ಮ ರಾಷ್ಟ್ರದಲ್ಲಿ ಕೆಲವೊಮ್ಮೆ ಧಾರ್ಮಿಕ ಭಿನ್ನಾಭಿಪ್ರಾಯಗಳಿಂದ ಸಮಾಜದಲ್ಲಿ ಘರ್ಷಣೆಗೊಳಗಾದಾಗ ಶಾಂತಿಗೆ ಧಕ್ಕೆ ಉಂಟಾಗುವುದಲ್ಲದೆ, ಪ್ರಗತಿಗೂ ತಡೆಯಾಗುತ್ತದೆ. ಈ ನಿರಂತರ ಸಮಸ್ಯೆಯನ್ನು ಹೋಗಲಾಡಿಸಲು ಎಳೆಯರಲ್ಲಿ ಪರಸ್ಪರ ಧರ್ಮಗಳ ಗೌರವವನ್ನು ಬೆಳೆಸಿದರೆ ದೇಶದಲ್ಲಿರುವ ವಿವಿಧ ಧರ್ಮೀಯರು ಸಾಮರಸ್ಯ ದಿಂದ ಪ್ರಗತಿಯತ್ತ ಮುಂದೆ ಸಾಗುವರೆಂಬ ಭರವಸೆಯಿಂದ ದಿ॥ ಶ್ರೀಮತಿ ಲಕ್ಷ್ಮಿಮುಜುಂದಾರ್ ರಾಷ್ಟ್ರೀಯ ಪ್ರಧಾನ ಆಯುಕ್ತರು, ಗಾಂಧೀಜಿಯವರ ಸರ್ವಧರ್ಮ ಸಮನ್ವಯ ಪ್ರಾರ್ಥನೆಯನ್ನು ಚಳವಳಿಯ ಅವಶ್ಯಕತೆಗೆ ತಕ್ಕಂತೆ ಮಾರ್ಪಡಿಸಿ ಅಳವಡಿಸಿದರು. ಇದೊಂದು ಸುಂದರ ಮತ್ತು ಪವಿತ್ರ ಸಮಾರಂಭ. ಪ್ರತಿಯೊಂದು ಶಿಬಿರಗಳಲ್ಲೂ ಮತ್ತು ಸ್ಕೌಟ್-ಗೈಡ್ ಸಮಾವೇಶಗಳಲ್ಲೂ ಸರ್ವಧರ್ಮ ಪ್ರಾರ್ಥನೆ ಹಮ್ಮಿಕೊಳ್ಳ-ಲಾಗುತ್ತದೆ.

ಎಲ್ಲಾ ಧರ್ಮಗಳಲ್ಲೂ ಸೇವೆಯ ಮೂಲಕ ಪರಮಾತ್ಮನನ್ನು ಕಾಣಬೇಕೆಂಬ ತತ್ವವಿದೆ. ಈ ತತ್ವವನ್ನು ಚಳವಳಿಯಲ್ಲಿ ಬಿ.ಪಿ. ಯವರು ಅಳವಡಿಸಿದ್ದಾರೆ. ಸ್ಕೌಟಿಂಗಿನ ಉದ್ದೇಶವೇ "ಸೇವೆಗಾಗಿ ಸದಾ ಸಿದ್ಧ"ವಾಗಿರುವುದು. ಮೇಫ್‌ಕಿಂಗ್ ಯುದ್ಧದಲ್ಲಿ ಬಾಲಕರ ಪಡೆ ಸಲ್ಲಿಸಿದ ಸೇವೆ ಮಾಧ್ಯಮಗಳಲ್ಲಿ ಪ್ರಸಾರವಾಗಿ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ನೂರಾರು ಬಾಲಕರು ಇದರಿಂದ ಪ್ರೇರಿತರಾಗಿ ಬೇಡನ್ ಪೋವೆಲ್‌ರಿಗೆ ಶುಭಕೋರುತ್ತಾ "ನಾವು ಏನನ್ನಾದರೂ ಮಾಡಬೇಕು. ನಾವೇನು ಮಾಡಬೇಕು?" ಎಂದು ಕೇಳಿದಾಗ "ದಿನಕ್ಕೊಂದು ಒಳ್ಳೆಯ ಕೆಲಸ" "Do a good turn a Day" ಎಂದು ತಿಳಿಸಿ, ಮುಂದೆ ಇದಕ್ಕೆ ವಿವರಣೆ ನೀಡಿ ಇದು ನಿಸ್ವಾರ್ಥ ಸೇವೆಯಾಗಿರಬೇಕು, ಪ್ರತಿಫಲಾಪೇಕ್ಷೆ ಇರಬಾರದು, ಅವಶ್ಯಕತೆ ಇರುವವರಿಗೆ ಮಾತ್ರ ಸೇವೆ ಮಾಡಬೇಕು ಎಂದು ವಿವರಣೆ ನೀಡಿದರು. ಈ ಒಳ್ಳೆಯ ಕೆಲಸದ ಅಭ್ಯಾಸವನ್ನು ಮುಂದುವರಿಸಿ ಸ್ಕೌಟ್-ಗೈಡ್ ಮಕ್ಕಳನ್ನು ಸಮುದಾಯ ಸೇವೆ, ಸಮುದಾಯ ಅಭಿವೃದ್ಧಿ ಸೇವೆಗಳಲ್ಲಿ ತೊಡಗಿಸಲಾಗುವುದು. ಆದ್ದರಿಂದ ಸ್ಕೌಟಿಂಗ್-ಗೈಡಿಂಗ್ ಯುವ ಜನಾಂಗದಲ್ಲಿ ಮನೋಧರ್ಮವನ್ನು ಬೆಳೆಸುವ ಮಾನವ ಧರ್ಮವಾಗಿದೆ.

ಮಾನವ ಧರ್ಮವೆಂದರೆ ಪ್ರಕೃತಿಯನ್ನು ರಕ್ಷಿಸುತ್ತಾ ಮಾನವ ಸಂಕುಲ ಶಾಂತಿ ಮತ್ತು ಪ್ರಗತಿಯತ್ತ ಸಾಗಬೇಕು, ಬದುಕಬೇಕು, "ಬದುಕಲು ಬಿಡಬೇಕು". "ನಗಬೇಕು, ನಗಿಸಬೇಕು". "ವಸುಧೆಯೇ ಒಂದು ಕುಟುಂಬವಾಗಿರಬೇಕು". ಇದರ ಹೈಟೆಕ್ ಕಲ್ಪನೆಯೆ ಜಾಗತಿಕ ಗ್ರಾಮ "Global Village" ಇದಕ್ಕಾಗಿ ಎಲ್ಲರೂ ತಮ್ಮ ತಮ್ಮ ಧರ್ಮವನ್ನು ಪಾಲಿಸುತ್ತಾ, ಆರ್ಥಿಕ ಬಡತನ, ದೈಹಿಕ ಬಡತನ ಮತ್ತು ಬೌದ್ಧಿಕ ಬಡತನದಿಂದ ನರಳುತ್ತಿರುವವರಿಗೆ ಸಹಾಯ ಮಾಡಬೇಕು. ಅದುವೇ ನಮ್ಮ ಸ್ಕೌಟಿಂಗ್, ಗೈಡಿಂಗ್‌ನ ಧರ್ಮ. ◆



# ಬನ್ನಿ ಯೋಜನೆ



◆ ಎನ್. ಕೆ ಛಾಯಾ, ಎಲ್. ಟಿ (ಗೈ)
ಕೇಂದ್ರ ಸ್ಥಾನಿಕ ಆಯುಕ್ತರು (ತರಬೇತಿ)

ಪೀಠಿಕೆ: ಜಪಾನಿನಲ್ಲಿ 3 ವರ್ಷದಿಂದ 5 ವರ್ಷದ ಮಕ್ಕಳಿಗೆ 1972ರಲ್ಲಿ ಟಮಟೋಲ ಬಗ್ಗೆ ತರಬೇತಿ ನೀಡಲು ಜಪಾನಿನ ಸ್ಕೌಟ್-ಗೈಡ್ ಸಂಸ್ಥೆಯವರು ಮಕ್ಕಳ 3ನೇ ವಯಸ್ಸಿನಿಂದಲೇ ಸ್ಕೌಟಿಂಗ್-ಗೈಡಿಂಗ್ ಮೂಲ ಸಿದ್ಧಾಂತಗಳು ರಕ್ತಗತವಾಗಲು ತರಬೇತಿಯನ್ನು ನೀಡಬೇಕೆಂಬ ಅಭಿಪ್ರಾಯದಿಂದ ಈ ವಿಭಾಗವನ್ನು ಪ್ರಾರಂಭಿಸಿ ಅದಕ್ಕೆ ಬೇಕಾದ ಪಠ್ಯಕ್ರಮವನ್ನು ನರ್ಸರಿ ಶಿಕ್ಷಕರು ಮಕ್ಕಳ ಮಾನಸಿಕ ಮತ್ತು ದೈಹಿಕ ಬೆಳವಣಿಗೆಗೆ ಅನುಗುಣವಾಗಿ ತರಬೇತಿ ನೀಡಲು ಪ್ರಾರಂಭಿಸಿದರು.

ಈ ಯೋಜನೆ ಭಾರತ್ ಸ್ಕೌಟ್ಸ್-ಗೈಡ್ಸ್‌ನ ರಾಷ್ಟ್ರೀಯ ಆಯುಕ್ತರಾಗಿದ್ದ ಶ್ರೀಮತಿ ಲಕ್ಷ್ಮಿ ಮುಜುಂದಾರ್ ಅವರ ಗಮನಕ್ಕೆ ಬಂದಾಗ, ನಮ್ಮಲ್ಲಿಯೂ "ಬನ್ನಿ ಟಮಟೋಲ"ಗಳನ್ನು ಪ್ರಾರಂಭಿಸಬೇಕೆಂದು ರಾಷ್ಟ್ರೀಯ ಸಂಸ್ಥೆಯ ಸಹಕಾರ್ಯದರ್ಶಿಯಾಗಿದ್ದ ಶ್ರೀಮತಿ ಪಟವರ್ಧನ್ ಅವರನ್ನು ಜಪಾನಿಗೆ ತರಬೇತಿಗಾಗಿ ಕಳುಹಿಸಿ, ಅಲ್ಲಿ ಅವರು ಪಡೆದ ತರಬೇತಿಯನ್ನು 1978ರಲ್ಲಿ ಕರ್ನಾಟಕದ ಮಂಗಳೂರಿನ ಸಮ್ಮರ್‌ಸಾಂಡ್‌ನಲ್ಲಿ ತರಬೇತಿಯನ್ನು ನಡೆಸಿದರು. ಇವರ ನಾಯಕತ್ವದಲ್ಲಿ ಶ್ರೀಮತಿ ರವಿವೆಸ್ಲಿ, ಪಿ. ಸರೋಜ, ಶ್ರೀಮತಿ ಪ್ರಮಿಳಾ, ಶ್ರೀಮತಿ ಎನ್.ಹೆಚ್. ಕಮಲಾಕ್ಷಮ್ಮ ಮತ್ತು ಎನ್. ಕೆ ಛಾಯ ಎ.ಎಸ್.ಓ.ಸಿಯವರುಗಳಿಗೆ ತರಬೇತಿ ನೀಡಲಾಯಿತು. ಬನ್ನಿ ತರಬೇತಿಯ ನಿಯಮ ಮತ್ತು ಬನ್ನಿ ಟಮಟೋಲಾದ ಪಠ್ಯಕ್ರಮಗಳು 5 ದಿನಗಳು.

3 ವರ್ಷದಿಂದ 5 ವರ್ಷದ ಮಕ್ಕಳಿಗೆ ಈ ನೂತನ ಕಾರ್ಯಕ್ರಮಗಳನ್ನು ಪರಿಚಯಿಸಲು ಆಲೋಚಿಸಿ. ಒಂದು ಸಮಿತಿ ರಚಿಸಿದರು ಮತ್ತು 'ಬನ್ನಿ' ಕಾರ್ಯಕ್ರಮಗಳನ್ನು ಪರಿಚಯಿಸಿದರು. ಅಂತಾರಾಷ್ಟ್ರೀಯ ಮಕ್ಕಳ ವರ್ಷದಂದು ಈ ಯೋಜನೆ ಪ್ರಾರಂಭಿಸಿದ್ದು, ಈ ಕಾರ್ಯಕ್ರಮಕ್ಕೆ ಉನ್ನತ ಮಟ್ಟದಲ್ಲಿ ಉತ್ತಮ ಪ್ರತಿಕ್ರಿಯೆ ಬಂತು. ಇದರ ಉದ್ದೇಶ ಆಕರ್ಷಿತವಾದ ಕಾರ್ಯಕ್ರಮಗಳನ್ನು ಕಿರಿಯ ಮಕ್ಕಳಿಗೆ ಪರಿಚಯಿಸುವುದು. ಇದು ಕಬ್/ ಬುಲ್ ಬುಲ್ ವಿಭಾಗಕ್ಕೆ ಪೋಷಿಸುವ ಕೆಲಸವಾಗುತ್ತದೆ ಎಂಬ ಉದ್ದೇಶದಿಂದ ಬಾಲಕ/ ಬಾಲಕಿಯರ ಕಾರ್ಯಕ್ರಮಗಳಿಗೆ ಪುನರ್ ಪರಿಚಯಿಸಲಾಗಿದೆ.

**ವಯಸ್ಸು:** 3ರಿಂದ 5 ವರ್ಷದ ಬಾಲಕ ಮತ್ತು ಬಾಲಕಿಯರಿಗೆ.

**ಗುಂಪಿನ ಹೆಸರು:** ಟಮಟೋಲ (ಬಾಲಕ & ಬಾಲಕಿ ಇಬ್ಬರಿಗೂ) ಗುಂಪು 20 ಸದಸ್ಯರಿಗಿಂತ ಹೆಚ್ಚಾಗಿ ಇರಬಾರದು. ಒಬ್ಬ ಬನ್ನಿ ಆಂಟಿಗೆ 10:1 ಪ್ರಮಾಣದಲ್ಲಿ ಇರಬೇಕು.

**ಬನ್ನಿ ನಿಯಮ:** ಒಳ್ಳೆಯವರಾಗುವುದಕ್ಕೆ ಪ್ರಯತ್ನಿಸುತ್ತೇನೆ ಬಾಲಕ/ಬಾಲಕಿ.

**ಧ್ಯೇಯ:** "ನಗುತ್ತಾ ಇರುವುದು"

**ಬನ್ನಿ ವಂದನೆ:** ಎರಡು ಕೈಗಳ (ಮೊದಲ ಮತ್ತು ಮಧ್ಯದ) ಬೆರಳು ಮೇಲೆತ್ತಿ ಕಿವಿಗಳ ಪಕ್ಕದಲ್ಲಿಟ್ಟು ವಂದಿಸಬೇಕು.

**ಸಮವಸ್ತ್ರ:** ಶಾಲೆಯ ಸಮವಸ್ತ್ರ ಅಥವಾ ಯಾವುದಾದರೂ ಉಡುಪು ಪ್ರಕಾಶಮಾನವಾದ ಹಿನ್ನೆಲೆಯಲ್ಲಿ ಮೇಲ್ಪಟ್ಟೆ ಮೇಲೆ ಮೊಲದ ಮರಿಲಾಂಛನ ಹೊಂದಿರಬೇಕು. ರಾಷ್ಟ್ರೀಯ ಸಂಸ್ಥೆಯು ಸೂಚಿಸಿದ ಲಾಂಛನ ಪದಕಕ್ಕೆ ಅಂಟಿಸಿದ ರೂಪದಲ್ಲಿರಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನದ ಜೊತೆಯಲ್ಲಿ ಮೊಲದ ಮರಿ ಬಲಗೈಯಲ್ಲಿ ಕ್ಯಾರೆಟ್‌ಎತ್ತಿ ಹಿಡಿದುಕೊಂಡಿರುವುದು. ಬಿಎಸ್‌ಜಿ ಲಾಂಛನದ ಜೊತೆಗೆ ತೇಪೆ ಹಾಕಿರುವ ಮೊಲದ ಮರಿ ಮಧ್ಯದಲ್ಲಿರಬೇಕು.

**ಬನ್ನಿ ನಾಯಕಿಯ ಸಮವಸ್ತ್ರ:** ಬನ್ನಿ ನಾಯಕಿಯನ್ನು ಬನ್ನಿ ಆಂಟಿ ಎಂದು ಕರೆಯುತ್ತಾರೆ. ಬನ್ನಿ ನಾಯಕಿ ಮಹಿಳೆಯರೇ ಆಗಿರಬೇಕು. ಹಿರಿಯರು ಧರಿಸುವ ಗೈಡ್ಸ್ ಶಿಕ್ಷಕಿ ಸಮವಸ್ತ್ರ ಆಗಿರಬೇಕು.

**ರಚನೆ:** ನಿರ್ಬಂಧವಿಲ್ಲದ ರಚನೆ ಕಾರ್ಯಕ್ರಮಗಳು:

ಬನ್ನಿ ಕಾರ್ಯಕ್ರಮಗಳು ಅವಲಂಬಿಸಿದ ನಾಲ್ಕು ಲಕ್ಷಣಗಳು ಯಾವುವೆಂದರೆ

1. ದೇವರಿಗೋಸ್ಕರ ಒಲವು 2. ಪ್ರಕೃತಿ ಪ್ರೇಮಿ 3. ಸೃಜನಾತ್ಮಕ ಚಟುವಟಿಕೆ 4. ಕೂಡಿ ಆಡುವುದರ ಕಲಿಕೆ/ಜ್ಞಾನ

ಕೆಳಗಿನ ಚಟುವಟಿಕೆಗಳ ಮೂಲಕ ಕಾರ್ಯಕ್ರಮಗಳನ್ನು ಸಾಧಿಸುವುದು:

1. ವೈಯಕ್ತಿಕ ಸ್ವಚ್ಛತೆ ಮತ್ತು ಸಾಮಾಜಿಕ ನಡವಳಿಕೆಗಳ ಹವ್ಯಾಸಗಳನ್ನು ಬೆಳೆಸುವುದು.

2. ಕತ್ತರಿಸಿದ ಭಾಗಗಳನ್ನು ಚಿತ್ರಗಳ ಆಕಾರದಲ್ಲಿ ಜೋಡಿಸುವುದು ಮುಂತಾದವುಗಳು

3. ಸರಳ ಮಾತಿನ/ ದೂರವಾಣಿಯ ಮೂಲಕ ಸಂದೇಶವನ್ನು ಕಳುಹಿಸುವುದು ಮತ್ತು ಪಡೆಯುವುದು.

4. ಭೇಟಿಯಾಗುವುದರ ಮತ್ತು ಹಿರಿಯರ ಜೊತೆ ಮಾತನಾಡುವ ರೀತಿ ವಿನಯದಿಂದ ಇರಬೇಕು.

5. ತಮ್ಮ ಸರದಿ ಬರುವತನಕ ಸಾಲಿನಲ್ಲಿ ನಿಲ್ಲುವುದು, ಸ್ಥಳಗಳನ್ನು ಸ್ವಚ್ಛತೆಯಿಂದ ಇಡುವುದು, ನೆಲದ ಕಸವನ್ನು ಡಬ್ಬಿಗೆ ಹಾಕಿ ಹಾಳು ಮಾಡದೆ ಇಡುವುದು. ಹೀಗೆ ಸಾಮಾಜಿಕ ಪಾವಿತ್ರ್ಯತೆ ಬೆಳೆಸುವುದು.

6. ಪೂರ್ಣ ಹೆಸರು, ವಿಳಾಸ (ದೂರವಾಣಿ ಸಂಖ್ಯೆ ಇದ್ದರೆ) ಮತ್ತು ಅವನ /ಅವಳ ತಂದೆ/ತಾಯಿಯ ಪೂರ್ಣ ಹೆಸರು ಮತ್ತು ವಿಳಾಸ ತಿಳಿಯುವುದು.

## ಬನ್ನಿ ನಾಯಕಿಯ ತರಬೇತಿ ಯೋಜನೆ

ಶಿಬಿರದ ಅವಧಿ–3 ದಿನಗಳು/ವಾರದ ಕೊನೆಯ ಎರಡು ದಿನಗಳು, ಕನಿಷ್ಠ ಸಂಖ್ಯೆ–08, ಯಾರು ನಡೆಸಬಹುದು? ತರಬೇತಿ ತಂಡದ ಗೈಡಿನ ಸದಸ್ಯೆಯಾಗಿರಬೇಕು.

1. ಬನ್ನಿಯ ಉದ್ದೇಶಗಳು
2. ಸ್ಕೌಟಿಂಗ್ / ಗೈಡಿಂಗ್‌ನ ಸಿದ್ಧಾಂತಗಳು
3. ಮಗುವಿನ ಮನಃಶಾಸ್ತ್ರ

ಅ. ಮನೋವಿಜ್ಞಾನದ ಪ್ರಕಾರ ಅಂದರೆ ಧೈರ್ಯಕೊಡುವ ಪದ್ಧತಿ–ಇಂದ್ರಿಯಗಳು ಮತ್ತು ಅದರ ಕಾರ್ಯಗಳು

ಆ. ಅಂಗಾಂಗಗಳ ಬೆಳವಣಿಗೆ – ಅಂಗಾಗ ಬೆಳವಣಿಗೆಯ ವೈಶಿಷ್ಟ್ಯಗಳು (ವಿಶೇಷ ಗುಣಗಳು)

ಇ. ಪ್ರೇರಕ ಮಾತುಗಳು

ಈ. ವ್ಯಕ್ತಿತ್ವದ ಬೆಳವಣಿಗೆ

ಉ. ಗೌರವದ ಮೇಲೆ ಇರುವ ಕಥೆಗಳು.

ಊ. ಆಟದ ಮೌಲ್ಯಗಳು

1(ಅ) ಪ್ರಾಕೃತಿಕ ಬೆಳವಣಿಗೆಗೆ ಚಟುವಟಿಕೆಗಳು

ನಿರ್ಬಂಧವಿಲ್ಲದ ಚಲನೆಗಳು– ಜಂಗಲ್‌ಜಿಮ್, ಉಯ್ಯಾಲೆ, ಮೆಟ್ಟಿಲುಗಳನ್ನು ಸುತ್ತುವುದು, ಮರ ಹತ್ತುವುದು, ಮೇಲೇರುವ ಆಟ, ಕೆಳಗೆ ಇಳಿಯುವ ಆಟ, ಹಗ್ಗದಾಟ, ಕುಪ್ಪಳಿಸುವುದು, ತಿರುಗುವ ವ್ಯಾಪಾರಿ ಮತ್ತು ಪಕ್ಷಿಗಳ ಮತ್ತು ಪ್ರಾಣಿಗಳ ಚಲನೆಯನ್ನು ಅನುಸರಿಸುವುದು ಮತ್ತು ಚಂಡುಗಳನ್ನು ಎಸೆಯುವುದು ಮತ್ತು ಹಿಡಿಯುವುದು.

(ಆ) ಜೀವನದ ಪ್ರತಿ ದಿನದ ಚಟುವಟಿಕೆಗಳೆಂದರೆ– ನೀರು ಚಿಮುಕಿಸುವುದು, ಸೀಸಕ್ಕೆ ನೀರು ತುಂಬುವುದು, ಕೈವಸ್ತ್ರ ಮಾಡುವುದು, ದಾರದಲ್ಲಿ ಮಣಿ ಪೋಣಿಸುವುದು, ಸ್ಥಳದ ಸ್ವಚ್ಛತೆ, ವಸ್ತುಗಳನ್ನು ಕ್ರಮವಾಗಿ ಇಡುವುದು.

(ಇ) ಸರಳ ತಾಳಬದ್ಧ ಚಟುವಟಿಕೆಗಳು ಯಾವುವೆಂದರೆ: ಕವಾಯತು, ವ್ಯಾಯಾಮ, ನೃತ್ಯ ಮುಂತಾದವುಗಳು.

2. ಇಂದ್ರಿಯಗಳ ಬೆಳವಣಿಗೆಯ ಚಟುವಟಿಕೆಗಳು ಯಾವುವೆಂದರೆ: ದೃಷ್ಟಿ, ವಾಸನೆ, ಆಲಿಸುವುದು, ಸ್ಪರ್ಶ ಮತ್ತು ರುಚಿ.

3. ಮಾನಸಿಕ ಬೆಳವಣಿಗೆಯ ಚಟುವಟಿಕೆಗಳು:

ಅ. ಅವನ/ಅವಳಷ್ಟಕ್ಕೆ ಮತ್ತು ಅವನ/ಅವಳ ಕುಟುಂಬದ ಬಗ್ಗೆ, ಶಿಕ್ಷಕರ ಶಾಲೆ ಮುಂತಾದವುಗಳ ಬಗ್ಗೆ ಮಾತನಾಡುವ ಸಾಮರ್ಥ್ಯ ಇರಬೇಕು.

ಆ. ಶಿಶುವಿಹಾರದ ಪದಗಳನ್ನು ನೆನಪಿನಲ್ಲಿಡುವುದು ಮತ್ತು ಹಾಡುವುದು.

ಇ. ವನದೇವತೆಗಳ, ಪ್ರಾಣಿಗಳ ಮತ್ತು ಪುರಾಣ ಕಥೆಗಳನ್ನು ಹೇಳುವುದು?

ಉ. ಚಿತ್ರಗಳಲ್ಲಿರುವ ಪ್ರಾಣಿಗಳನ್ನು ತಿಳಿಯುವುದು, ಪರಿಚಯವಿರುವ ಪ್ರಾಣಿ, ಪಕ್ಷಿಗಳ ಕೂಗನ್ನು ಅನುಸರಿಸುವುದು.

ಊ. ಅಭಿನಯದ ಹಾಡುಗಳು, ಸರಳ ಸಾಮೂಹಿಕ ನೃತ್ಯಗಳು ಸರಳ ನಾಟಕಗಳನ್ನು ಕಲಿಯುವುದು.

ಋ. ಸರಳ ಆಕರ್ಷಕ ವಸ್ತುಗಳ ಶೇಖರಣೆ.

4. **ಸೃಜನಾತ್ಮಕ ಚಟುವಟಿಕೆಗಳು:** ಸರಳ ಕರಕುಶಲತೆಗಳು– ಕತ್ತರಿಸಿದ ಕಾಗದದಿಂದ, ಜೇಡಿಮಣ್ಣಿನ ಆಕೃತಿ (ಮಾದರಿ) ಮರದದಿಮ್ಮಿ, ಬಣ್ಣದಿಂದ ಚಿತ್ರ ಬಿಡಿಸುವುದು, ಸಣ್ಣ ಚೂರುಗಳನ್ನು ಅಂಟಿಸುವುದು.

5. **ಪ್ರಕೃತಿ ವೀಕ್ಷಣೆ:** ಪಕ್ಷಿಗಳು, ಮರಗಳು, ಹೂಗಳು, ಚಿಟ್ಟೆಗಳು, ಗರಿಗಳು, ಶಂಖ ಬೆಳೆಯುವ ಸಸಿ (ಗಿಡ)

ಕೆಳಗಿನವುಗಳ ಜೊತೆಗೆ ಪೂರ್ವ ಸಿದ್ಧತೆ ಮತ್ತು ಚಟುವಟಿಕೆಗಳು (ಆಟಗಳು)

ಅ. ಮಾನಸಿಕ ಬೆಳವಣಿಗೆ
ಆ. ಭಾವನಾತ್ಮಕ ಬೆಳವಣಿಗೆ
ಇ. ಮಗುವಿನ ಪ್ರಾಕೃತಿಕ ಸ್ಥಿತಿ
ಈ. ಧಾರ್ಮಿಕ ಕಥೆಗಳು, ಅಭಿನಯ ಗೀತೆಗಳು ಅಥವಾ ಪದಗಳು ಮತ್ತು ನೀತಿಯ ಶಿಕ್ಷಣ (ಕಲಿಕೆ)
ಉ. ಅಭಿನಯ ನಾಟಕ

**ಕೈ ಕೆಲಸ:** ಪ್ರಕೃತಿ ಅಧ್ಯಯನ

ಪರಿಚಯದ ಪಕ್ಷಿಗಳು, ಮರಗಳು, ಹೂಗಳು, ತರಕಾರಿಗಳು, ಹಣ್ಣುಗಳು, ತಾಳಕ್ಕೆ ತಕ್ಕ ಪದಗಳು.

ಅ. 3 ವರ್ಷದಿಂದ 5 ವರ್ಷದ ಮಕ್ಕಳಿಗೆ ಪ್ರಕೃತಿ ಮತ್ತು ವಿಧವಿಧವಾದ ಹಾಡುಗಳು.
ಆ. ತಾಳಕ್ಕೆ ತಕ್ಕಂತೆ ಪದಗಳು.
ಇ. ತಾಳಕ್ಕೆ ತಕ್ಕಂತೆ ಚಲನೆಗಳು.
ಈ. ವಿಧವಿಧವಾದ ಹಾಡುಗಳು.

**ಬನ್ನಿ ನಾಯಕಿ ಮತ್ತು ಅವರ ವಿದ್ಯಾರ್ಹತೆ:**

18 ವರ್ಷವಾಗಿರಬೇಕು, 3 ರಿಂದ 5 ವರ್ಷದ ಮಕ್ಕಳ ಜೊತೆ ಆಡುವ, ಹಾಡುವ, ಮತ್ತು ಸರಳ ಕರಕುಶಲ ಹೇಳಿಕೊಡುವ ಸಾಮರ್ಥ್ಯ ಇರಬೇಕು.

**ರಾಜ್ಯದಲ್ಲಿ ಬನ್ನಿ ತರಬೇತಿ ನಡೆದ ಜಿಲ್ಲೆಗಳ ವಿವರ :**

ರಾಜ್ಯದಲ್ಲಿ ಈಗಾಗಲೇ ಕೆಳಕಂಡ 13 ಜಿಲ್ಲಾ ಸಂಸ್ಥೆಗಳಲ್ಲಿ ಬನ್ನಿ ಟಮಟೋಲ ತರಬೇತಿಯನ್ನು ನೀಡಿ 500 ದಳಗಳನ್ನು ಪ್ರಾರಂಭಿಸಲಾಗಿದೆ.

ಬೆಳಗಾವಿ, ಬೆಂಗಳೂರು ದಕ್ಷಿಣ, ಬೆಂಗಳೂರು ಉತ್ತರ, ಬೆಂಗಳೂರು ಗ್ರಾಮಾಂತರ, ಬಿ.ಬಿ.ಎಂ.ಪಿ. ಜಿಲ್ಲಾ ಸಂಸ್ಥೆ, ದಕ್ಷಿಣ ಕನ್ನಡ, ದಾವಣಗೆರೆ, ಚಿಕ್ಕಮಗಳೂರು, ಹಾವೇರಿ, ಕೋಲಾರ, ಶಿವಮೊಗ್ಗ, ವಿಜಯಪುರ, ಉಡುಪಿ.

---

ಸತ್ಯದ ಮಾರ್ಗದಲ್ಲಿ ನಡೆಯುವವನು ಯಾವ ಕಾಲಕ್ಕೂ ಯಾವುದಕ್ಕೂ ಹೆದರಿಕೊಳ್ಳಬೇಕಾಗಿಲ್ಲ.

**- ಮಹಾತ್ಮ ಗಾಂಧೀಜಿ**



ನನಗೇನಾದರೂ ಒಂದು ಡಜನ್ ಮಕ್ಕಳಿದ್ದಿದ್ದರೆ ಅವರಲ್ಲಿ ಪ್ರತಿಯೊಬ್ಬನನ್ನೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಗೆ ಕಳುಹಿಸುತ್ತಿದ್ದೆ.

**- ಡಾ|| ಅನಿಬೆಸೆಂಟ್**



20ನೆಯ ಶತಮಾನದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಅತ್ಯಂತ ಮಹತ್ವದ ಕೊಡುಗೆ ಬಂದಿರುವುದು ಶಿಕ್ಷಣತಜ್ಞರಿಂದಲ್ಲ; ಸ್ಕೌಟ್ ಚಳವಳಿಯನ್ನು ಸ್ಥಾಪಿಸಿದ ಸಿಪಾಯಿಯಿಂದ.

**- ಜಾರ್ಜ್ ಬರ್ನಾಡ್ ಷಾ**



ಸ್ಕೌಟ್ಸ್, ಗೈಡ್ಸ್ ಇದು ಮೂಲತಃ ಚಾರಿತ್ರ್ಯ ಬೆಳೆಸುವ ಒಂದು ಚಳವಳಿಯಾಗಿದ್ದು, ನಮ್ಮ ರಾಷ್ಟ್ರದ ಅಷ್ಟೇ ಏಕೆ – ಇಡೀ ಪ್ರಪಂಚದ ಪ್ರಜಾಪ್ರಭುತ್ವ ಸಮಾಜದ ಭಾರವನ್ನು ಹೊರಲು ಹಾಗೂ ನಾವು ಯೋಗ್ಯ ನಾಗರೀಕರಾಗಲು ತರಬೇತಿ ನೀಡುತ್ತದೆ.

**- ಎಸ್. ನಿಜಲಿಂಗಪ್ಪ**



# ಸಂಸ್ಥಾಪಕ ಬೇಡನ್ ಪೊವೆಲ್‌ರಿಂದ ಪೋಷಕರಿಗೆ ಸಂದೇಶ

ನಿಮ್ಮ ಬಾಲಕ - ಬಾಲಕಿ ಸ್ಕೌಟ್ / ಗೈಡ್ ಆಗಬೇಕು, ಏಕೆಂದರೆ,

1. ಸ್ಕೌಟಿಂಗ್ / ಗೈಡಿಂಗ್ ನಿಮ್ಮ ಹುಡುಗ / ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ.

2. ಸ್ಕೌಟಿಂಗ್ / ಗೈಡಿಂಗ್ – ಯಾವುದೇ ಉದ್ಯೋಗದಲ್ಲಿ ಹುಡುಗ/ ಹುಡುಗಿಯ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುತ್ತದೆ.

3. ಸ್ಕೌಟಿಂಗ್ / ಗೈಡಿಂಗ್ – ಒಂದು ಸೈನಿಕ ಚಳವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸ ಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.

4. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.

5. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.

6. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.

7. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.

8. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.

9. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.

10. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.

11. ಸ್ಕೌಟಿಂಗ್ / ಗೈಡಿಂಗ್ – ನಿಮ್ಮ ಹುಡುಗ / ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.

12. ಸ್ಕೌಟಿಂಗ್ / ಗೈಡಿಂಗ್–ನಿಮ್ಮ ಹುಡುಗ / ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.

Baden-Powell of Gilwell

**ಬೇಡನ್ ಪೊವೆಲ್**

With Best Compliments from



Ph : 080 - 23455522

# MAHESH MEMORIAL KENDRIYA VIDYASHALA

**Affiliated to CBSE, New Delhi, Affiliation No. 830468**

**Academic Partner**

## Academy for Creative Teaching



**PROF. S.G. MANUR**
Chairman, MMKV



**SMT. LATHA MANUR**
Secretary, MMKV

**# 33, Doddabommasandra, Vidyaranyapura Post**
**Bengaluru - 560097. Website : www.mmkv.ac.in**

*Best Wishes From:*

## ASSOCIATED MANAGEMENTS OF PRIMARY & SECONDARY SCHOOLS IN KARNATAKA (Regd.) KAMS

(Govt. Recognised - English Medium)






Shri. Puttanna MLC
Honorary President



President



Shri. M.A. Anand
Hon. President



Shri. D. Shashi Kumar
General Secretary

Correspondence Office :

Blossoms School Office Building, 29th Cross, Bagalgunte Main Road, Bangalore - 560 073,
Ph : 080-28371264, Mob : 9886497910, E-mail : kamskarnataka@gmail.com
Website : www.kamskarnataka.com | Web TV : blossomstv.com

With Best Compliments from

**BS&G Bengaluru North District Association**

# Hebbal Local Association

**For the Success of 28th Karnataka State Jamborette**

**Smt. Indumathi**
LA Secretary
On behalf of Hebbal Local Association

No. 281, C/o Sri B.N. Shankar
11th Cross, 2nd Block
Jayanagar, Bengaluru - 560 011

**M.: 9739524181**
**induananth.mn@gmail.com**



Hon. Secretary Smt. Jyothi H.K., ALT(G)



*WITH BEST COMPLIMENTS FROM*

# MALLESWARAM LOCAL ASSOCIATION

Bengaluru North, The Bharat Scouts & Guides, Karnataka
#18,HQ: Premises of Sri Chamundi Scout Group, Malleswaram
Bengaluru-560003. ESTD. 1950s.

**Motto: EVERGREEN EVERSHINE**

**Nurtured by:** Smt. Loka Sundari Raman w/o Sir C V Raman
Lt. Col. V.K. Sundaram, Major Y.V.K. Murthy, Dr. Madhava Rao
Sri. N.S. Kulakarni, Mr. Fred J. Hemi, Dr. Capt. Ananda Alwar
Col. Haridev Katkar, Prof. H.G. Balakrishna & many more

**Present members:**

President: **Sri Manjunath Raju**, BBMP Corporator
Chairperson: **Sri K. Narasimha Murthy,** GL SCSG
ADCs: **Smt. Kamalakshi Hegde, Sri C. Mouli, Sri Manjunath**
Hon. Secretary: **Smt. H.K. Jyothi,** ALT (G)
Joint Secretary: **Sri Kushal**, RSL






# THE HUTTI GOLD MINES COMPANY LIMITED

(A Government of Karnataka Undertaking)






- Mining since Pre-Ashokan times
- Hutti Mine is the deepest underground mine in the country as on date.



ಚಿತ್ರದುರ್ಗ ಚಿನ್ನದ ಘಟಕದಲ್ಲಿ 11.40 ಮೆ.ವ್ಯಾ. ಸಾಮರ್ಥ್ಯದ ಗಾಳಿ ಯಂತ್ರವನ್ನು ಸ್ಥಾಪಿಸಿದೆ










The New Refinery unit was started in the year 2018. The process involves refining of Gold Dore Bars to 999 purity fine Gold.




## ತೃಣಮೂಲದಿಂದಲೂ ಅಭಿವೃದ್ಧಿಯನ್ನು ಸಾಧಿಸುತ್ತ ಬಂದಿದೆ

- ಶೈಕ್ಷಣಿಕ ವಿದ್ಯಾಕೇಂದ್ರಗಳನ್ನು ನಿರ್ಮಿಸುವುದರೊಂದಿಗೆ 10,500 ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಒದಗಿಸಿದೆ
- ಹಟ್ಟಿ ಸುತ್ತಮುತ್ತಲಿನ ಗ್ರಾಮಗಳಿಗೆ ಕುಡಿಯುವ ನೀರಿನ ಸೌಕರ್ಯವನ್ನು ಒದಗಿಸಿದೆ
- ಹಟ್ಟಿಯಲ್ಲಿ ಸಮುದಾಯ ಶೌಚಾಲಯಗಳನ್ನು ನಿರ್ಮಿಸುವುದು ಮತ್ತು ಉಟಿ ಹಾಗೂ ಹಿರಾ-ಬುದ್ದಿನಿ ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ
- ಹಟ್ಟಿಯಲ್ಲಿ ಬಸ್‌ನಿಲ್ದಾಣವನ್ನು ಸ್ಥಾಪಿಸಿದೆ
- ಪ್ರವಾಹ ಪೀಡಿತ ಸಂತ್ರಸ್ತರಿಗಾಗಿ 900 ಮನೆಗಳನ್ನು ನಿರ್ಮಿಸಿಕೊಟ್ಟಿದೆ
- ಹಟ್ಟಿಯಲ್ಲಿ ಕೇಂದ್ರೀಯ ವಿದ್ಯಾಲಯ ಶಾಲೆಯನ್ನು ಸ್ಥಾಪಿಸಿದೆ
- 250 ಕೋಟಿ ವೆಚ್ಚದಲ್ಲಿ 3 ತಾಲ್ಲೂಕುಗಳ ಅಭಿವೃದ್ಧಿಗೆ ಮಾಸ್ಟರ್ ಪ್ಲಾನ್ ರೂಪಿಸಿದೆ

# ದಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ

(ಕರ್ನಾಟಕ ಸರ್ಕಾರದ ಒಂದು ಉದ್ಯಮ)

ಹಟ್ಟಿ 584115, ರಾಯಚೂರು ಜಿಲ್ಲೆ, ಕರ್ನಾಟಕ ಭಾರತ. ದೂರವಾಣಿ: +91 8537-275022
ನೋಂದಣಿ ಕಛೇರಿ: 3ನೇ ಮಹಡಿ, ಕೆ.ಹೆಚ್.ಬಿ ನ್ಯೂ ಶಾಪಿಂಗ್ ಕಾಂಪ್ಲೆಕ್ಸ್, ರಾಷ್ಟ್ರೀಯ ಕ್ರೀಡಾ ಗ್ರಾಮ, ಕೋರಮಂಗಲ (ಅಂಚೆ)
ಬೆಂಗಳೂರು - 560047, ಭಾರತ.

ದೂರವಾಣಿ: +91 8025705723 / 25705725, ಇ-ಮೇಲ್: hgml@vsnl.com



## ಜೆಎಸ್‌ಎಸ್ ಮಹಾವಿದ್ಯಾಪೀಠ
ಮೈಸೂರು

# “ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಶಿಕ್ಷಣವೇ ಅಡಿಪಾಯ”

– ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು

---

ಜಗದ್ಗುರು ಶ್ರೀ ವೀರಸಿಂಹಾಸನ ಮಹಾಸಂಸ್ಥಾನ ಮಠದಿಂದ ಸ್ಥಾಪಿತವಾದ ಜೆಎಸ್‌ಎಸ್ ಮಹಾವಿದ್ಯಾಪೀಠ ತನ್ನ ಶೈಕ್ಷಣಿಕ ಕ್ರಾಂತಿಯನ್ನು 1954ರಲ್ಲಿ ಒಂದು ವಿದ್ಯಾರ್ಥಿನಿಲಯದಿಂದ ಪ್ರಾರಂಭಿಸಿತು. ಇಂದು ಬೃಹತ್ ಶಿಕ್ಷಣ ಕ್ರಾಂತಿಯನ್ನು ಸೃಷ್ಟಿಸಿರುವ ಮಹಾವಿದ್ಯಾಪೀಠವು. 2 ವಿಶ್ವವಿದ್ಯಾನಿಲಯ ಒಳಗೊಂಡಂತೆ ಶಿಶುವಿಹಾರಗಳಿಂದ ಹಿಡಿದು ಸ್ನಾತಕೋತ್ತರ ಕೇಂದ್ರಗಳು ಹಾಗೂ ಡಾಕ್ಟರೇಟ್ ನಂತರದ ಸಂಶೋಧನಾ ಕೇಂದ್ರಗಳವರೆಗೆ 300ಕ್ಕೂ ಹೆಚ್ಚಿನ ಸಂಖ್ಯೆಯ ಸಂಸ್ಥೆಗಳನ್ನು ಹೊಂದಿದ್ದು, 1,00,000ಕ್ಕೂ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳ ಶೈಕ್ಷಣಿಕ ಅಗತ್ಯಗಳನ್ನು ಪೂರೈಸುತ್ತಿದೆ. ಜೆಎಸ್‌ಎಸ್ ಮಹಾವಿದ್ಯಾಪೀಠದಲ್ಲಿ ಎಲ್.ಕೆ.ಜಿ.ಯಿಂದ ಶಿಕ್ಷಣವನ್ನು ಪ್ರಾರಂಭಿಸಿದರೆ ಪಿ.ಹೆಚ್‌ಡಿ. ಪಡೆಯುವವರೆಗೂ ಮುಂದುವರೆಸುವ ಅವಕಾಶವಿದೆ.

ಜೆಎಸ್‌ಎಸ್ ಮಹಾವಿದ್ಯಾಪೀಠವು ಕೇವಲ ಕರ್ನಾಟಕದಲ್ಲಿ ಅಷ್ಟೇ ಅಲ್ಲದೇ ದೇಶದ ನಾನಾ ರಾಜ್ಯಗಳಲ್ಲಿಯೂ ತನ್ನ ಶಿಕ್ಷಣ ಕ್ರಾಂತಿಯನ್ನು ವಿಸ್ತರಿಸಿ, ದುಬೈ, ಮಾರಿಷಸ್ ಹಾಗೂ ಅಮೇರಿಕಾ ದೇಶಗಳಲ್ಲಿಯೂ ಸಹ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಮುನ್ನಡೆಸುತ್ತಿದೆ.




ಜೆಎಸ್‌ಎಸ್ ಆಸ್ಪತ್ರೆ, ಮೈಸೂರು: ಒಂದೇ ಸೂರಿನಡಿ 1800 ಹಾಸಿಗೆಗಳಿರುವ ಭಾರತದ ದೊಡ್ಡ ಅತ್ಯಾಧುನಿಕ ಸುಸಜ್ಜಿತ ಆಸ್ಪತ್ರೆಗಳಲ್ಲಿ ಒಂದು

**ಜೆಎಸ್‌ಎಸ್ ಉನ್ನತ ಶಿಕ್ಷಣ ಹಾಗೂ ಸಂಶೋಧನಾ ಸಂಸ್ಥೆ**
(ಡೀಮ್ಡ್-ಟು-ಬಿ ವಿಶ್ವವಿದ್ಯಾಲಯ)




| | |
|---|---|
| ಭಾರತದಲ್ಲಿನ ವಿಶ್ವವಿದ್ಯಾಲಯಗಳ ರ‍್ಯಾಂಕಿಂಗ್‌ನಲ್ಲಿ 3ನೇ ಸ್ಥಾನ | ವಿಶ್ವಾದ್ಯಂತ 500 ವಿಶ್ವವಿದ್ಯಾಲಯಗಳ ರ‍್ಯಾಂಕಿಂಗ್‌ನಲ್ಲಿ 401ನೇ ಸ್ಥಾನ |

**ತಾಂತ್ರಿಕ ಶಿಕ್ಷಣದಲ್ಲಿ ಅಂತರಾಷ್ಟ್ರೀಯ ಗುಣಮಟ್ಟದ ಅತ್ಯುನ್ನತ ತರಬೇತಿ ಹಾಗೂ ಕೋರ್ಸ್‌ಗಳನ್ನು ಪರಿಚಯಿಸಲು ಜೆಎಸ್‌ಎಸ್ ವಿಜ್ಞಾನ ಹಾಗೂ ತಾಂತ್ರಿಕ ವಿಶ್ವವಿದ್ಯಾನಿಲಯದ ಸ್ಥಾಪನೆ**

ಜೆಎಸ್‌ಎಸ್ ವಿಕಲಚೇತನರ ಪಾಲಿಟೆಕ್ನಿಕ್, ಮೈಸೂರು

---

ಸಹನಾ ಶಾಲೆಗಳು–ವಿಶೇಷ ಚೇತನ ಮಕ್ಕಳಿಗಾಗಿ ಏಕೀಕೃತ ಶಿಕ್ಷಣ ಶಾಲೆಗಳು

---

ಮೈಸೂರಿನಲ್ಲಿ ವಿಕಲಚೇತನವುಳ್ಳ ದುಡಿಯುವ ಮಹಿಳೆಯರಿಗೆ ವಿದ್ಯಾರ್ಥಿನಿಲಯವಿದೆ.

## ಜೆಎಸ್‌ಎಸ್ ಮಹಾವಿದ್ಯಾಪೀಠದ ಸಂಸ್ಥೆಗಳು

### ವೈದ್ಯಕೀಯ ಶಿಕ್ಷಣ
- ವೈದ್ಯಕೀಯ ಕಾಲೇಜು – 01
- ದಂತವೈದ್ಯಕೀಯ ಕಾಲೇಜು – 01
- ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ – 01
- ಔಷಧ ವಿಜ್ಞಾನ ಕಾಲೇಜು – 02
- ಶುಶ್ರೂಷ ಸಂಸ್ಥೆಗಳು – 03
- ಶುಶ್ರೂಷ ಕಾಲೇಜು – 01
- ವಾಕ್ ಮತ್ತು ಶ್ರವಣ ಕಾಲೇಜು – 02
- ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವಿಜ್ಞಾನಗಳ ಸಂಸ್ಥೆ – 01
- ಫಿಸಿಯೋಥೆರಪಿ ಕಾಲೇಜು – 01

### ತಾಂತ್ರಿಕ ಶಿಕ್ಷಣ
- ಇಂಜಿನಿಯರಿಂಗ್ ಕಾಲೇಜುಗಳು – 04
- ರಿಸರ್ಚ್ ಫೌಂಡೇಶನ್ – 01
- ಪ್ರೈವೇಟ್ ಲಿ. ಕಂಪನಿ – 01
- ಪಾಲಿಟೆಕ್ನಿಕ್‌ಗಳು – 04
- ಕೈಗಾರಿಕಾ ತರಬೇತಿ ಕೇಂದ್ರಗಳು – 03
- ಅಂತರಾಷ್ಟ್ರೀಯ ಸಂಸ್ಥೆಗಳು – 03

### ಸಮಾಜ ಸೇವಾ ಸಂಸ್ಥೆಗಳು
- ಆಸ್ಪತ್ರೆಗಳು – 10
- ಅನಾಥಾಲಯಗಳು – 14
- ನಿರ್ಗತಿಕರಿಗಾಗಿ ಗೃಹಗಳು – 03
- ವೃದ್ಧಾಶ್ರಮ – 02
- ಸಾಮಾನ್ಯ ವಿದ್ಯಾರ್ಥಿನಿಲಯಗಳು – 07
- ವಿದ್ಯಾರ್ಥಿನಿಲಯಗಳು – 29
- ಗುರುಕುಲ – 02
- ಸಹಕಾರ ಸಂಘಗಳು – 06

### ಕಲೆ ಮತ್ತು ಸಂಸ್ಕೃತಿ
- ಸಾಂಪ್ರದಾಯಿಕ ಕೇಂದ್ರಗಳು – 08
- ಅರ್ಬನ್ ಹಾತ್ – 01
- ಇತರೆ – 06

### ಪ್ರಕಟಣೆಗಳು
- ಪುಸ್ತಕಗಳು ಮತ್ತು ಪತ್ರಿಕೆಗಳು – 06

**130** ಶಾಲಾ ಶಿಕ್ಷಣ ಸಂಸ್ಥೆಗಳು

**23** ಕಾಲೇಜು ಶಿಕ್ಷಣ ಸಂಸ್ಥೆಗಳು

**19** ವೃತ್ತಿಪರ ಶಿಕ್ಷಣ ಸಂಸ್ಥೆಗಳು

**11** ಟ್ರಸ್ಟ್‌ಗಳು

**4** ನಗರ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳು

**1** ಕರ್ನಾಟಕ ಮುಕ್ತ ವಿದ್ಯಾಲಯ

**4** ನಿರ್ವಹಣಾ ಅಧ್ಯಯನ ಸಂಸ್ಥೆಗಳು

**3** ಪ್ರೋಷಿತ ಸಂಸ್ಥೆಗಳು




**ಜೆಎಸ್‌ಎಸ್ ಮಹಾವಿದ್ಯಾಪೀಠ**
ಜಗದ್ಗುರು ಡಾ॥ ಶ್ರೀ ಶಿವರಾತ್ರಿ ರಾಜೇಂದ್ರ ವೃತ್ತ, ಮೈಸೂರು–570004
ದೂರವಾಣಿ: 0821–2548201 ರಿಂದ 2548217, ಫ್ಯಾಕ್ಸ್: 0821–2548218, www.jssonline.org




# ಸಕಾಲ

**ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ-2011**
**ಮತ್ತು (ತಿದ್ದುಪಡಿ) ಅಧಿನಿಯಮ, 2014**




**ನಿಗದಿತ ಸಮಯದಲ್ಲಿ ಸೇವೆಗಳು ಲಭ್ಯ**

**ಇಂದು..ನಾಳೆ..ಇನ್ನಿಲ್ಲ**
**ಹೇಳಿದ ದಿನ ತಪ್ಪೋಲ್ಲ**

91 ಇಲಾಖೆಗಳು

1033 ಸೇವೆಗಳು

ದೇಶದಲ್ಲಿ ಅತಿ ಹೆಚ್ಚು

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ- ಆಡಳಿತ). ಸಹಾಯವಾಣಿ 080 4455 4455, ವೆಬ್‌ಸೈಟ್: www.sakala.kar.nic.in, email : sakala@nic.in




**ಸೇವಾ ಸಿಂಧು:** ಸರಕಾರಿ ಸೇವೆಗಳನ್ನು ಜನರ ಮನೆ ಬಾಗಿಲಿಗೆ ತಲುಪಿಸಲು ಕರ್ನಾಟಕ ಸರಕಾರದ ಒಂದು ಉಪಕ್ರಮವಾಗಿದೆ ಸೇವಾ ಸಿಂಧು. ಸೇವಾ ಸಿಂಧುವನ್ನು ಸರಕಾರದ ವಿವಿಧ ಸೇವಾ ಪೂರೈಕೆ ಜಾಲಗಳೊಂದಿಗೆ ಸಂಯೋಜಿಸಲಾಗುವುದು. ಅವುಗಳೆಂದರೆ ಬೆಂಗಳೂರು ಒನ್, ಸಿಎಸ್‌ಸಿ ಕೇಂದ್ರಗಳು, ಕರ್ನಾಟಕ ಒನ್, ಅಟಲ್‌ಜಿ ಜನ ಸ್ನೇಹಿ ಕೇಂದ್ರ ಮತ್ತು ಬಾಪೂಜಿ ಕೇಂದ್ರಗಳು ಮತ್ತು ಎಲ್ಲಾ ವಿಭಾಗೀಯ ಸೇವೆಗಳನ್ನು ಒಂದೇ ವೇದಿಕೆಯಡಿ ತರಲು ಉದ್ದೇಶಿಸಲಾಗಿದೆ. ಸರಕಾರಿ ಸೇವೆಗಳನ್ನು ನಗದುರಹಿತ, ಮುಖಾಮುಖಿ ರಹಿತ ಮತ್ತು ಕಾಗದ ರಹಿತ ವ್ಯವಸ್ಥೆಯಲ್ಲಿ ಒದಗಿಸುವುದು ಇದರ ಉದ್ದೇಶ.. ಇದು ಸಾರ್ವಜನಿಕರಿಗೆ ಸುಲಭವಾಗಿ, ಪರಿಣಾಮಕಾರಿ ವೆಚ್ಚ ಜವಾಬ್ದಾರಿಯು ಹಾಗೂ ಪಾರದಶಕ ಸರಕಾರಿ ಸೇವೆಗಳನ್ನು ಒದಗಿಸುವ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಯಾಗಿದೆ.

ಕಡಿಮೆ ವಹಿವಾಡು ಸಮಯ, ಸೇವೆಗಳನ್ನು ಪಡೆಯಲು ಕಡಿಮೆ ಭೇಟಿಗಳು ಮತ್ತು ಅವಕಾಶ ವೆಚ್ಚವನ್ನು ಕಡಿಮೆ ಮಾಡುವ ಮೂಲಕ ಯಾವುದೇ ಅಡೆತಡೆ ರಹಿತವಾಗಿ ಸೇವೆಯನ್ನು ವಿತರಣೆ ಮಾಡುವುದಾಗಿದೆ ಸೇವಾ ಸಿಂಧು. ತೊಡಕುಗಳನ್ನು ನಿವಾರಿಸಿ ಸಮಯ ಉಳಿತಾಯ ಮತ್ತು ಮೌಲ್ಯೇತರ ಹಂತಗಳನ್ನು ತೆಗೆದುಹಾಕಿ ಇಲಾಖೆಯ ಪ್ರಕ್ರಿಯೆಗಳನ್ನು ಸರಳೀಕರಿಸಲು ಸೇವಾ ಸಿಂಧು ಇಲಾಖೆಗೆ ನೆರವಾಗಲಿದೆ. ಇದರಿಂದಾಗಿ ನಾಗರಿಕ ಸೇವಾ ಪೂರೈಕೆ ಕಾರ್ಯ ವಿಧಾನವನ್ನು ಹೆಚ್ಚಿಸಲಿದೆ.

ವೆಬ್‌ಸೈಟ್: https://sevasindhu.karnataka.gov.in

## ಜನ ಸೇವಕ: ಕರ್ನಾಟಕದಲ್ಲಿ ನಾಗರಿಕ ಸೇವೆಗಳು ಮನೆ ಬಾಗಿಲಿಗೆ

2019-20ನೇ ಸಾಲಿನ ಬಜೆಟ್‌ನಲ್ಲಿ ಕರ್ನಾಟಕ ಸರಕಾರ 'ಸರಕಾರಿ ಸೇವೆಗಳು ಮನೆ ಬಾಗಿಲಿಗೆ' ಎಂದು ಘೋಷಿಸಿದೆ. ಪೈಲಟ್ ಯೋಜನೆಯನ್ನು ಬೆಂಗಳೂರು ಉತ್ತರದ ಟಿ. ದಾಸರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ದಿನಾಂಕ 02.03.2019ರಂದು ಆರಂಭಿಸಲಾಗಿತ್ತು. ಮುಂದಿನ ದಿನಗಳಲ್ಲಿ ಈ ಯೋಜನೆಯನ್ನು ರಾಜಾಜಿನಗರ, ಬೊಮ್ಮನಹಳ್ಳಿ ಮತ್ತು ಮಹದೇವಪುರ ವಿಧಾನಸಭಾ ಕ್ಷೇತ್ರಗಳಲ್ಲಿ ವಿಸ್ತರಿಸಲಾಗುವುದು.

ಈ ಯೋಜನೆಯು ಕರ್ನಾಟಕ ನಾಗರಿಕರಿಗೆ ಈ ಕೆಳಗಿನ ವಿಧಾನಗಳಲ್ಲಿ ಅಪಾರ ಪ್ರಯೋಜನವನ್ನು ನೀಡಲಿದೆ:

1. ನಾಗರಿಕರು ಸರಕಾರಿ ಕಚೇರಿಗಳು ಮತ್ತು ಸೇವಾ ಕೇಂದ್ರಗಳಿಗೆ ಪ್ರಯಾಣಿಸಲು ಸಮಯ ಹಾಗೂ ವೆಚ್ಚವನ್ನು ಭರಿಸಬೇಕಾಗಿಲ್ಲ ಮತ್ತು ಸರತಿ ಸಾಲಿನಲ್ಲಿ ಕಾಯಬೇಕಾಗಿಲ್ಲ.
2. ವಿಕಲಚೇತನರು ಮತ್ತು ಹಿರಿಯ ನಾಗರಿಕರು ಈ ಸೇವೆಗಳನ್ನು ಸುಲಭವಾಗಿ ಪಡೆಯುವುದರಿಮದ ಪ್ರಯೋಜನ ಪಡೆಯಲಿದ್ದಾರೆ.
3. ತರಬೇತಿ ಪಡೆದ ಕಾಲ್ ಸೆಂಟರ್ ಪ್ರತಿನಿಧಿಗಳು ಮತ್ತು ಸೇವಕರಿಂದ ಸೇವೆಗಳನ್ನು ಪಡೆಯುವ ಪ್ರಕ್ರಿಯೆಗಳ ಬಗ್ಗೆ ನಾಗರಿಕರಿಗೆ ಸ್ಪಷ್ಟತೆ ಮತ್ತು ಮಾರ್ಗದರ್ಶನ ಪಡೆಯಲು ಸಾಧ್ಯವಾಗುತ್ತದೆ.
4. ಅರ್ಜಿದಾರರ ಅನುಕೂಲಕ್ಕೆ ತಕ್ಕಂತೆ ಕಚೇರಿ ಅವಧಿಯ ಮೊದಲ ಅಥವಾ ನಂತರ ಮನೆ ಭೇಟಿಗಾಗಿ ಸಮಯವನ್ನು ನಿಗದಿಪಡಿಸಬಹುದು.

ಆರು ತಿಂಗಳ ಪೈಲಟ್ ಯೋಜನೆಯ ಯಶಸ್ವಿಯ ನಂತರ, ಪೈಲಟ್ ಯೋಜನೆಯಿಂದ ಅರಿತುಕೊಂಡು ಯೋಜನೆಯನ್ನು ಹಂತ ಹಂತವಾಗಿ ಇಡೀ ರಾಜ್ಯದಲ್ಲಿ ಜಾರಿಗೆ ತರಲು ಯೋಜಿಸಲಾಗಿದೆ. ಪೈಲಟ್ ಯೋಜನೆ ಆರಂಭಗೊಮಡ ಪ್ರಥಮ ಹಂತದ ಪ್ರಥಮ ದಿನದಿಂದ ಸೇವೆಗಳಾದ 1. ಜಾತಿ ಪ್ರಮಾಣ ಪತ್ರ 2. ಆದಾಯ ಪ್ರಮಾಣ ಪತ್ರ 3. ಜಾತಿ ಮತ್ತು ಆದಾಯ ಪ್ರಮಾಣ ಪತ್ರ 4. ಹಿರಿಯ ನಾಗರಿಕರ ಗುರುತಿನ ಚೀಟಿ 5. ಆಯುಷ್ಮಾನ್ ಭಾರತ ಆರೋಗ್ಯ ಕರ್ನಾಟಕ ಕಾರ್ಡುಗಳು 6. ಬಿ.ಬಿ.ಎಂ.ಪಿ ಖಾತಾ ಸೇವೆಗಳು 7. ಧವಾ ವೇತನ ಪ್ರಮಾಣ ಪತ್ರ, ಅಂಗವಿಕಲ ವೇತನ 8. ಸಂಧ್ಯಾ ಸುರಕ್ಷಾ ಮುಂತಾದ 41 ಸೇವೆಗಳನನು ನೀಡಲಾಗುವುದು.

ನಾಗರಿಕರಿಂದ ಯಶಸ್ವಿಯಾಗಿ ಪ್ರತಿಯೊಂದು ಅರ್ಜಿಗಳನ್ನು ಸಲ್ಲಿಸಲಾದ ಪ್ರತಿ ಅರ್ಜಿಗೆ ಇಲಾಖಾ ಶುಲ್ಕಕ್ಕೆ ಹೆಚ್ಚುವರಿಯಾಗಿ 115 ರೂ.ಗಳ ಸೇವಾ ಶುಲ್ಕವನ್ನು ವಿಧಿಸಲಾಗುತ್ತದೆ. ನಾಗರಿಕರು ಸೇವೆಗಳನ್ನು ಪಡೆಯಲು ನೇಮಕಾತಿಗಳನ್ನು ಕಾಯ್ದಿರಿಸಲು ಸಹಾಯವಾಣಿ ಸಂಖ್ಯೆ 0804455 4455 ಗೆ ಕರೆ ಮಾಡಬಹುದು.

# ಜನ ಸೇವಕ

## ನಾಗರಿಕರ ಮನೆ ಬಾಗಿಲಿಗೆ ಸರ್ಕಾರದ ಸೇವೆಗಳು




### ಈ ಯೋಜನೆಯಿಂದ ನಿಮಗೇನು ಲಾಭ?

- ಸರ್ಕಾರಿ ಕಚೇರಿಗಳ ಮುಂದೆ ಸರತಿಯಲ್ಲಿ ನಿಂತು ಕಾಯುವ ಅಗತ್ಯವಿಲ್ಲ
- ಸಮಯದ ಉಳಿತಾಯ
- ಸರ್ಕಾರಿ ಕಚೇರಿಗಳಿಗೆ ಭೇಟಿ ನೀಡಲು ತಗಲುವ ಸಂಚಾರ ವೆಚ್ಚದಲ್ಲಿ ಉಳಿತಾಯ
- ಹಿರಿಯ ನಾಗರಿಕರು / ಮಹಿಳೆಯರು / ವಿಶೇಷ ಚೇತನರು ಮನೆಯಲ್ಲಿಯೇ ಸರ್ಕಾರದ ನಾಗರಿಕ ಸೇವೆಗಳನ್ನು ಪಡೆಯಬಹುದು.
- ಮಧ್ಯವರ್ತಿಗಳ ಹಾವಳಿ ಇರುವುದಿಲ್ಲ.
- ಕರ್ನಾಟಕ ಸರ್ಕಾರವು ನಿಗದಿತಗೊಳಿಸಿರುವ ರೂ. 115 ಹಾಗೂ ಸಂಬಂಧಿತ ಸೇವಾ ಶುಲ್ಕ.

### ಇಲಾಖಾವಾರು ಸೇವೆಗಳು ಲಭ್ಯ

* ಕಂದಾಯ ಇಲಾಖೆ * ಆರೋಗ್ಯ ಇಲಾಖೆ * ಪೊಲೀಸ್ ಇಲಾಖೆ * ವಸತಿ ಇಲಾಖೆ * ಸಾರ್ವಜನಿಕ ಶಿಕ್ಷಣ ಇಲಾಖೆ * ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ * ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಮಂಡಳಿ * ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ * ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ * ಪದವಿ ಪೂರ್ವ ಶಿಕ್ಷಣ ಇಲಾಖೆ * ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ * ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ * ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ



# ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ

**ನಮ್ಮ ಮನೆ**
**ನಮ್ಮ ನೀರು**
**ನಮ್ಮ ಭವಿಷ್ಯ**
**ಎಲ್ಲವೂ ನಮ್ಮ ಕೈಯಲ್ಲಿದೆ**

ಬೆಂಗಳೂರು ಮಹಾನಗರದ ಜನತೆಗೆ ಶುದ್ಧ ಕುಡಿಯುವ ನೀರು ಪೂರೈಸುವುದು ಜಲಮಂಡಳಿಯ ಧ್ಯೇಯವಾಗಿದೆ. ನಗರ ಬೆಳೆದಂತೆಲ್ಲಾ ಹೆಚ್ಚುತ್ತಿರುವ ಬೇಡಿಕೆಯನ್ನು ಪೂರೈಸುವಲ್ಲಿ ಹಂತ ಹಂತವಾಗಿ ನೂತನ ಯೋಜನೆಗಳನ್ನು ರೂಪಿಸುವ ಮೂಲಕ ನಿಭಾಯಿಸಲಾಗುತ್ತಿದೆ.

ನೀರೇ ಬದುಕು–ನೀರೇ ಉಸಿರು. ನೀರು ಪ್ರಕೃತಿಯ ಅಮೂಲ್ಯ ಕೊಡುಗೆ. ಅದನ್ನು ವ್ಯರ್ಥ ಮಾಡದೆ ಮಿತವಾಗಿ ಹಾಗೂ ಸರಿಯಾಗಿ ಬಳಸುವುದು ನಮ್ಮೆಲ್ಲರ ಆದ್ಯ ಕರ್ತವ್ಯ ಬನ್ನಿ, ನೀರನ್ನು ಮಿತವಾಗಿ ಬಳಸಿ ನಾಳೆಗಾಗಿ ಉಳಿಸೋಣ.

ನೀರನ್ನು ಉಳಿಸಿ
ಬೆಂಗಳೂರು ಉಳಿಸಿ...
ಇಂದಿನಿಂದಲೇ



# ನಿಮ್ಮ ಅಮೂಲ್ಯ ಜೀವದ ಸುರಕ್ಷತೆ ನಮ್ಮ ಆದ್ಯತೆ




## ವಿದ್ಯುತ್ ಬಗ್ಗೆ ಜಾಗ್ರತೆ ಇರಲಿ!
## ಸದಾ ಸುರಕ್ಷತಾ ಕ್ರಮಗಳನ್ನು ಪಾಲಿಸಿ

✓ **ಮಾಡಿ:**

- ✓ ವಿದ್ಯುತ್ ಸುರಕ್ಷತೆ ಬಗ್ಗೆ ವಿದ್ಯುತ್ ತಂತಿಗಳಿಂದ ದೂರವಿರಲು ನಿಮ್ಮ ಮಕ್ಕಳಿಗೆ ಶಿಕ್ಷಣ ನೀಡುವುದು.
- ✓ ವಿದ್ಯುತ್ ಸ್ವಿಚ್‌ಗಳು ಹಾಗೂ ವಿದ್ಯುತ್ ಉಪಕರಣಗಳು ಮಕ್ಕಳ ಕೈಗೆ ಎಟುಕದಂತಿರಲಿ.
- ✓ ಯಾವಾಗಲೂ 3 ಪಿನ್‌ಗಳ ಪ್ಲಗ್ / ಸಾಕೆಟ್‌ಗಳನ್ನು ಬಳಸಿ ಹಾಗೂ 3ನೇ ಪಿನ್ ಅರ್ಥಿಂಗ್ ಆಗಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳುವುದು.
- ✓ ವೈರಿಂಗ್ ಕೆಲಸವನ್ನು ಸರ್ಕಾರಿ ಲೈಸನ್ಸ್ ಹೊಂದಿದ ವಿದ್ಯುತ್ ಗುತ್ತಿಗೆದಾರರಿಂದ ಮಾಡಿಸಿಕೊಳ್ಳುವುದು.
- ✓ ನಿಮ್ಮ ವಿದ್ಯುತ್ ಸಂಪರ್ಕಕ್ಕೆ ಸೂಕ್ತ ಗ್ರೌಡಿಂಗ್ ವ್ಯವಸ್ಥೆ ಮಾಡಲಾಗಿದೆಯೇ ಎಂಬುದನ್ನು ಖಾತ್ರಿಪಡಿಸಿಕೊಳ್ಳುವುದು.
- ✓ ಯಾವಾಗಲೂ ಐ.ಎಸ್.ಐ ಪ್ರಮಾಣಿತ ಉಪಕರಣಗಳು /ವೈರ್ /ಕೇಬಲ್‌ಗಳನ್ನೇ ಬಳಸುವುದು.
- ✓ ವಿದ್ಯುತ್ ಉಪಕರಣಗಳನ್ನು ಸುರಕ್ಷತೆಗಾಗಿ ನಿಯತಕಾಲಿಕವಾಗಿ ಪರೀಕ್ಷಿಸಿಕೊಳ್ಳುವುದು.
- ✓ ವಿದ್ಯುತ್ ಉಪಕರಣಗಳನ್ನು ಅಧಿಕೃತ ಎಲೆಕ್ಟ್ರೀಷಿಯನ್‌ರವರಿಂದ ಮಾತ್ರ ದುರಸ್ತಿ ಮಾಡಿಸುವುದು.

✗ **ಮಾಡಬೇಡಿ:**

- × ಕಟ್ಟಡಗಳನ್ನು ವಿದ್ಯುತ್ ತಂತಿಗಳ ಸಮೀಪ ನಿರ್ಮಿಸಬೇಡಿ.
- × ತುಂಡಾಗಿ ಬಿದ್ದ ವಿದ್ಯುತ್ ತಂತಿಗಳನ್ನು ಮುಟ್ಟಬೇಡಿ, ತಕ್ಷಣ ಬೆವಿಕಂ ಸಹಾಯವಾಣಿ 1912 ಗೆ ಕರೆ ಮಾಡಿ.
- × ವಿದ್ಯುತ್ ಸ್ವಿಚ್‌ಗಳು ಹಾಗೂ ವಿದ್ಯುತ್ ಉಪಕರಣಗಳನ್ನು ಒದ್ದೆ ಕೈಗಳಿಂದ ಮುಟ್ಟಬೇಡಿ.
- × ವಿದ್ಯುತ್ ಕಂಬಗಳಿಗೆ ಬ್ಯಾನರ್ ಅಥವಾ ಜಾಹೀರಾತು ಫಲಕಗಳನ್ನು ಕಟ್ಟಬೇಡಿ.
- × ವಿದ್ಯುತ್ ಕಂಬಗಳಿಗೆ ಬಟ್ಟೆಗಳನ್ನು ಒಣಗಿಸುವ ತಂತಿಯನ್ನುಕಟ್ಟಬೇಡಿ.
- × ವಿದ್ಯುತ್ ಕಂಬಗಳನ್ನು ಹತ್ತಬೇಡಿ.
- × ವಿದ್ಯುತ್ ತಂತಿಗಳ ಹತ್ತಿರವಿರುವ ಮರದ ರೆಂಬೆ-ಕೊಂಬೆಗಳನ್ನು ಕಡಿಯಬೇಡಿ.
- × ವಿದ್ಯುತ್ ತಂತಿಗಳ ಮೇಲೆ ಬಿದ್ದಿರುವ ಮರಗಳನ್ನು ಹಾಗೂ ಕೊಂಬೆಗಳನ್ನು ತೆಗೆಯಲು ಪ್ರಯತ್ನಿಸಬೇಡಿ.
- × ತಂತಿ ಬೇಲಿಗಳಿಗೆ ವಿದ್ಯುತ್ ಹಾಯಿಸಬೇಡಿ.
- × ಬೆವಿಕಂ ಲೈನ್‌ನಿಂದ ಅಕ್ರಮವಾಗಿ ವಿದ್ಯುತ್ ಸಂಪರ್ಕವನ್ನು ಪಡೆಯಬೇಡಿ.














ಸಾರ್ವಜನಿಕ ಹಿತಾಸಕ್ತಿಯಿಂದ ಪ್ರಕಟಿತ

**ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ**

[illegible]

[illegible]

**24x7** ಗಂಟೆಗಳ ಸಹಾಯವಾಣಿ **1912** ಗೆ ಕರೆ ಮಾಡಿ ಅಥವಾ

58888ಗೆ **SMS** ಮೂಲಕ ದೂರು ದಾಖಲಿಸಿ ಅಥವಾ

ವಿದ್ಯುತ್ ಸುರಕ್ಷತೆಯ ಕುರಿತು ವಾಟ್ಸಾಪ್ ಸಂಖ್ಯೆ **9483191212/9483191222**

## ಎಚ್ಚರದಿಂದಿರಿ - ಸುರಕ್ಷಿತವಾಗಿರಿ

# ಶಾನ್‌ಭೋಗ್ ದಾಸಪ್ಪ ದತ್ತಿ






**1929 – 1999**

**ಕುರುವಂಕ ಅಂಚೆ, ಅರಸೀಕೆರೆ ತಾಲ್ಲೂಕು,**
**ಹಾಸನ ಜಿಲ್ಲೆ.**

ನೊಂದಣಿ ಸಂಖ್ಯೆ 37, 1968/69

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕ್, ಬಾಣಾವರ ಹೋಬಳಿ, ಕುರುವಂಕ ಗ್ರಾಮದ ಶ್ರೀಮತಿ ವೆಂಕಟಲಕ್ಷ್ಮಮ್ಮ ಮತ್ತು ಶಾನ್‌ಭೋಗ್ ಶ್ರೀ ಶಾಮಣ್ಣನವರ ಅವಿಭಕ್ತ ಕುಟುಂಬದಲ್ಲಿ ಹಿರಿಯರಾಗಿ ಶ್ರೀ ದಾಸಪ್ಪನವರು 1929ರಲ್ಲಿ ಜನಿಸಿದರು.

ಶ್ರೀ ದಾಸಪ್ಪನವರು ತಮ್ಮ ತಂದೆ ಶಾನ್‌ಭೋಗ್ ಶಾಮಣ್ಣನವರ ನಿಧನಾನಂತರ ಶಾನುಭೋಗರಾಗಿ ಹಾಗೂ ಕೃಷಿಕರಾಗಿಯೂ ಮಾದರಿಯಾಗಿ ಬಾಳಿದ್ದಾರೆ.

ಶ್ರೀಮತಿ ಶಾರದಮ್ಮ ಅವರನ್ನು ವಿವಾಹವಾಗಿ, ನಾಲ್ಕು ಜನ ಗಂಡು ಮಕ್ಕಳು, ಮೂರು ಜನ ಹೆಣ್ಣು ಮಕ್ಕಳನ್ನು ಪಡೆದು, ತುಂಬುಕುಟುಂಬವನ್ನು ಸಮರ್ಥವಾಗಿ ನಿಭಾಯಿಸಿ, ಮಕ್ಕಳನ್ನು ವಿದ್ಯಾ–ವಿನಯಸಂಪನ್ನರನ್ನಾಗಿ ಬೆಳೆಸಿ ಸಾರ್ಥಕ ಜೀವನ ನಡೆಸಿರುತ್ತಾರೆ.

ತಮ್ಮ ತೆಂಗಿನ ತೋಟದ ಗಳಿಕೆಯ ಸ್ವಲ್ಪ ಭಾಗವನ್ನು ಸಮಾಜಕ್ಕಾಗಿ ಉಳಿಸಿ, ತಮ್ಮ ಆಪ್ತಸಖ ಹಾಸನ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ವೈ. ರೂಪ್ಲಾ ನಾಯಕ್ ಅವರ ನೆರವಿನಿಂದ "ಶಾನ್‌ಭೋಗ್ ದಾಸಪ್ಪ ದತ್ತಿ"ಯನ್ನು 1968ರಲ್ಲಿ ಸ್ಥಾಪಿಸಿದರು.

ಶಾನ್‌ಭೋಗ್ ವೃತ್ತಿಯ ಅವಧಿಯಲ್ಲಿ ಸ್ವಗ್ರಾಮವಾದ ಕುರುವಂಕ ಗ್ರಾಮದಲ್ಲಿ ಶಾಲೆ, ಅಂಚೆಕಛೇರಿ, ಆಯುರ್ವೇದ ಚಿಕಿತ್ಸಾಲಯ, ಆಂಜನೇಯಸ್ವಾಮಿ ದೇವಸ್ಥಾನ, ಆಂಜನೇಯನಿಗೆ ರಥ, ಕಳಶ ಎಲ್ಲವನ್ನೂ ತಮ್ಮ ಸ್ವಂತ ಖರ್ಚಿನಲ್ಲಿ ಮಾಡಿದ್ದಾರೆ.

ಬಳಿಗೆ ಬಂದು ಆಶ್ರಯಬೇಡಿದವರನ್ನು ಬರಿಗೈಯಲ್ಲಿ ಕಳಿಸದೇ ಸಹಾಯ ಮಾಡಿದ್ದಾರೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಸೇವಾ ಕಾರ್ಯಮಾಡಿ ಸಾರ್ಥಕ ಜೀವನ ನಡೆಸಿದ್ದಾರೆ.

ಶಾಲೆಯಲ್ಲಿ ಚುರುಕುಮತಿಯವರಾಗಿದ್ದ ಶಾನ್‌ಭೋಗ್ ದಾಸಪ್ಪನವರು "ಸ್ಕೌಟ್ ಅಂಡ್ ಗೈಡ್ಸ್"ನಲ್ಲೂ ಸಕ್ರಿಯರಾಗಿದ್ದರೆಂದು ತಿಳಿಸಲು ಹೆಮ್ಮೆಆಗುತ್ತದೆ.

APEX




ನಂ. 1, "ಉತ್ತುಂಗ", ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – 560018
ದೂರವಾಣಿ ಸಂ: 080 – 22976600/26678324/26679374 ಫ್ಯಾಕ್ಸ್: 080 – 26628521
ಇಮೇಲ್: admin@karnatakaapex.com

ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು 1915ರಲ್ಲಿ ಸ್ಥಾಪನೆಗೊಂಡು, 2019ನೇ ಸಾಲಿಗೆ 104 ವರ್ಷಗಳ ಸುದೀರ್ಘ ಸೇವೆಯನ್ನು ಪೂರೈಸಿರುತ್ತದೆ. ಬ್ಯಾಂಕು ರೈತರಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಕೃಷಿಸಾಲಗಳನ್ನು ನೀಡುವುದಲ್ಲದೆ, ಬೆಂಗಳೂರು ನಗರದಲ್ಲಿರುವ ಗ್ರಾಹಕರಿಗೆ ತನ್ನ 51 ಶಾಖೆಗಳ ಮೂಲಕ ಎಲ್ಲಾ ರೀತಿಯ ಬ್ಯಾಂಕಿಂಗ್ ಸೇವೆಗಳನ್ನು ನೀಡುತ್ತಿದೆ. ಅಲ್ಲದೇ ಸಂಸ್ಕರಣ, ಮಾರಾಟ ಸಹಕಾರ ಸಂಸ್ಥೆಗಳಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ನಗದು ಸಾಲಗಳನ್ನೂ ಸಹ ನೀಡುತ್ತಿದೆ.

## ಕಳೆದ 3 ವರ್ಷಗಳಲ್ಲಿ ಅಪೆಕ್ಸ್ ಬ್ಯಾಂಕಿನ ಸಾಧನೆ

| ವಿವರಗಳು | (ರೂ.ಕೋಟಿಗಳಲ್ಲಿ) 2016–17 | 2017–18 | 2018–19 |
|---|---|---|---|
| ಠೇವಣಾತಿಗಳು | 7363.79 | 9151.42 | 9510.92 |
| ಮುಂಗಡಗಳು | 10774.72 | 10917.33 | 12041.65 |
| ದುಡಿಯುವ ಬಂಡವಾಳ | 16076.06 | 17034.34 | 18130.43 |
| ನಿವ್ವಳ ಲಾಭ | 33.00 | 34.25 | 50.00 |

## ಅವಧಿ ಠೇವಣಿಗಳ ಮೇಲೆ ಹಾಲಿ ಇರುವ ಬಡ್ಡಿದರಗಳು

| | |
|---|---|
| 15 ರಿಂದ 30 ದಿನಗಳು | 4.75% |
| 31 ರಿಂದ 45 ದಿನಗಳು | 5.25% |
| 46 ರಿಂದ 90 ದಿನಗಳು | 6.00% |
| 91 ರಿಂದ 179 ದಿನಗಳು | 6.75% |
| 180 ದಿನಗಳಿಂದ 1 ವರ್ಷದವರೆಗೆ | 7.00% |
| 1 ವರ್ಷಕ್ಕೆ ಹಾಗೂ 1 ವರ್ಷಕ್ಕೆ ಮೇಲ್ಪಟ್ಟು | 7.25% |

## ವಿಶೇಷ ಬಡ್ಡಿದರ

ಹಿರಿಯ ನಾಗರಿಕರಿಗೆ 0.5% ಹೆಚ್ಚಿನ ಬಡ್ಡಿದರ ಹಾಗೂ 1 ವರ್ಷಕ್ಕೆ ಹಾಗೂ ಮೇಲ್ಪಟ್ಟ ರೂ.15.00 ಲಕ್ಷಗಳ ವೈಯಕ್ತಿಕ ಠೇವಣಿಗೆ 0.5% ಹೆಚ್ಚಿನ ಬಡ್ಡಿ ನೀಡಲಾಗುತ್ತಿದೆ.

ಪ್ರಸ್ತುತ ಬ್ಯಾಂಕಿನ ಎಲ್ಲಾ ಶಾಖೆಗಳು ಮತ್ತು ಕೇಂದ್ರ ಕಛೇರಿಯ ವ್ಯವಹಾರಗಳು ಕೋರ್ ಬ್ಯಾಂಕಿಂಗ್ ವ್ಯವಸ್ಥೆಯಡಿಯಲ್ಲಿದ್ದು, ಎನಿ ಬ್ರಾಂಚ್ ಬ್ಯಾಂಕಿಂಗ್ ಪದ್ಧತಿಯನ್ನು ಅನುಷ್ಠಾನಗೊಳಿಸಲಾಗಿದೆ. ಕೇಂದ್ರೀಕೃತ ಕ್ಲಿಯರಿಂಗ್ ಪದ್ಧತಿ (ECS/CTS) ಜಾರಿಯಲ್ಲಿದೆ. ಹಾಗೂ RTGS/NEFT, POS, E-Commerce ಮತ್ತು ಸೌಲಭ್ಯಗಳು ATM ಲಭ್ಯವಿದೆ. ಬ್ಯಾಂಕು ಎಲ್ಲಾ ಶಾಖೆಗಳ ಮೂಲಕ ಈ – ಸ್ಟ್ಯಾಂಪಿಂಗ್ ಮತ್ತು ಲಾಕರ್ ಸೌಲಭ್ಯವನ್ನು ನೀಡುತ್ತಿದೆ.

ಬ್ಯಾಂಕಿನಲ್ಲಿ ಗೃಹಸಾಲ, ವಾಹನ ಸಾಲ, ಚಿನ್ನಾಭರಣ ಸಾಲ, ಗೃಹ/ ನಿವೇಶನ ಅಡಮಾನ ಸಾಲ, ಕಂತುಸಾಲ, ಶಿಕ್ಷಣ ಸಾಲ, ಸ್ವಯಂ ಉದ್ಯೋಗಿಗಳಿಗೆ ಸಾಲ ವೃತ್ತಿ ಪರರಿಗೆ ಸಾಲ ಮುಂತಾದ ಸಾಲ ಯೋಜನೆಗಳಿದ್ದು, ಕಡಿಮೆ ಬಡ್ಡಿದರಗಳಲ್ಲಿ ಲಭ್ಯವಿದೆ.

2018–19ನೇ ಸಾಲಿನಲ್ಲಿ ರಾಜ್ಯದ 21 ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಮತ್ತು 5099 ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮೂಲಕ 19.98ಲಕ್ಷ ರೈತರಿಗೆ ರೂ. 11116.75 ಕೋಟಿಗಳಷ್ಟು ಕೃಷಿ ಸಾಲವನ್ನು ವಿತರಿಸಲಾಗಿದ್ದು, ಈ ಪೈಕಿ 19.72 ಲಕ್ಷ ರೈತರಿಗೆ ರೂ. 10550.75 ಕೋಟಿಗಳಷ್ಟು ಶೂನ್ಯ ಬಡ್ಡಿದರದಲ್ಲಿ ಕೃಷಿ ಸಾಲವನ್ನು ವಿತರಿಸಲಾಗಿದೆ. ಅಪೆಕ್ಸ್ ಬ್ಯಾಂಕ್ ಮುಖಂಡತ್ವದಲ್ಲಿ ಸ್ವಸಹಾಯ ಗುಂಪುಗಳಿಗೆ ಶೇ. ಶೂನ್ಯ ಬಡ್ಡಿದರದಲ್ಲಿ ಡಿ.ಸಿ.ಸಿ. ಬ್ಯಾಂಕುಗಳು ಮತ್ತು ಪ್ರಾಥಮಿಕ ಕೃಷಿ ಸಹಕಾರ ಸಂಘಗಳ ಮೂಲಕ ರೂ. 6662.20 ಸಂಚಿತ ಮುಂಗಡಗಳನ್ನು ನೀಡಲಾಗಿದೆ.

ಬ್ಯಾಂಕು ಇಫ್ಕೋ ಟೋಕಿಯೋ ಸಾಮಾನ್ಯ ವಿಮಾ ಕಂಪನಿ ಸಹಯೋಗದೊಂದಿಗೆ ವಿಮಾ ಯೋಜನೆ ಮತ್ತು ಬಜಾಜ್ ಅಲಿಯಾನ್ಸ್ ಹಾಗೂ ಎಕ್ಸೈಡ್ ವಿಮಾ ಕಂಪೆನಿಗಳ ಸಹಯೋಗದೊಂದಿಗೆ ಜೀವ ವಿಮಾಪಾಲಿಸಿ ಸೌಲಭ್ಯಗಳನ್ನು ಗ್ರಾಹಕರಿಗೆ ನೀಡುತ್ತಿದೆ ಹಾಗೂ ಪ್ರಧಾನ ಮಂತ್ರಿ ಜೀವನಜ್ಯೋತಿ ಬಿಮಾಯೋಜನೆ ಮತ್ತು ಪ್ರಧಾನಮಂತ್ರಿ ಸುರಕ್ಷಾ ಬೀಮಾಯೋಜನೆಗಳನ್ನು ಬ್ಯಾಂಕಿನಲ್ಲಿ ಅನುಷ್ಠಾನಗೊಳಿಸಲಾಗಿದೆ.

ಶ್ರೀ ಕೆ.ಎನ್. ರಾಜಣ್ಣ
ಮಾಜಿ ಶಾಸಕರು
ಅಧ್ಯಕ್ಷರು

ಎಂ. ವೆಂಕಟಸ್ವಾಮಿ ಕೆ.ಸಿ.ಎಸ್.
ಮುಖ್ಯ ಕಾರ್ಯನಿರ್ವಹಣಾಧಿಕಾರಿ

ಶ್ರೀ ಟಿ.ಎಮ್. ಚಂದ್ರಶೇಖರಯ್ಯ
ಉಪಾಧ್ಯಕ್ಷರು